

ಶ್ರೀ ಬ್ರಹ್ಮಾನಂದ ಗಣೇಶ ಯೋಗೀ.

# ಅಧ್ಯಾತ್ಮವಿಚಾರ

ಗಣೇಶ ಯೋಗಿಯಿಂದ ರಚಿಸಲ್ಪಟ್ಟಿತು.

ಇದರಲ್ಲಿ

ಭಕ್ತಿ, ಜ್ಞಾನ ಮತ್ತು ಯೋಗದ ವಿಷಯ
ವಿಸ್ತಾರಪೂರ್ವಕ ವಿಚಾರ ಮತ್ತು ಅಭ್ಯಾಸಕ್ರಮ ಮತ್ತು
ಅನೇಕ ಸಾಧು ಸಂತರಿಂದ ವಿರಚಿತವಾದ ಕರ್ಣಾಟಕ
ಮರಾಠಿ ಪದಗಳು ಸೇರಿಸಲ್ಪಟ್ಟವೆ.

ಮಂಗಳೂರು

ಶಾರದಾ ಛಾಪಖಾನೆಯಲ್ಲಿ ಛಾಪಿಸಲ್ಪಟ್ಟಿತು.

1920

# ಗ್ರಂಥಸಮರ್ಪಣೆ.

ಈ ಪುಸ್ತಕವನ್ನು ಶ್ರೀ ಮತ್ಪರಮಹಂಸ ಪರಿವ್ರಾಜಕಾಚಾರ್ಯ ಚಿತ್ರಾಪುರ ಮಠಾಧಿಪತಿಗಳಾದ ಶ್ರೀಮನ್ ಪಾಂಡುರಂಗಾಶ್ರಮಯತಿಗಳ ಶಿಷ್ಯರಾಗಿಯೂ ಯೋಗನಿಷ್ಠರಾಗಿಯೂ ಇರುವ ಆನಂದಾಶ್ರಮ ಗೌಡಪಾದಂಗಳವರ ಚರಣಕ್ಕೆ ತಮ್ಮ ಶಿಷ್ಯಾನುಶಿಷ್ಯನಾದ ನಾನು ಇದನ್ನು ಪ್ರೀತಿಯಿಂದಲೂ ವಿನಯದಿಂದಲೂ ಇದ ಅರ್ಪಿಸುತ್ತೇನೆ.

ಸುಜೀರ ಉಮಾನಾಥರಾವ್

ಸಂಪಾದಕ.

# ಅವತರಣಿಕೆ.

ಭ್ರಾತೃಗಳೇ!

ಪಾಶ್ಚಾತ್ಯ ತೆರನ ನವನಾಗರಿಕತೆಯು ಒಣಹುಲ್ಲಿಗೆ ಹಿಡಿದ ಬೆಂಕಿಯಂತೆ ಎಲ್ಲೆಲ್ಲಿಯೂ ಹಬ್ಬಿಕೊಂಡಿದೆ. ಲೌಕಿಕ ವಿಚಾರವು ದೈವಿಕವನ್ನು ಎಲ್ಲೋ ಮೂಲೆಗೊತ್ತಿ, ಕೆಲ ಶತಮಾನಗಳ ಹಿಂದೆ ಹೋದ ಹಾಗೆ ದೀರ್ಘ ಸ್ವರದಿಂದ ವೇದಪಾರಾಯಣ ಗೈಯುವ ಭಕ್ತಿ ಪೂರಿತವಾದ, ಇಂಪಾಗಿ ದಿಕ್ಕುಗಳನ್ನೇ ಮಂಕಾಗಿಮಾಡಿ ಕೇಳುತ್ತಿದ್ದ ದನಿಯು ಈಗ ಶೈತ್ಯದಿಂದಲೋ ಏನೋ ಎಂಬಂತೆ ಅಡಗಿಯೇ ಹೋಗಿರುವುದು. ಮಹಾ ಪುರುಷರನ್ನೂ, ಯೋಗಿಗಳನ್ನೂ, ಕಮಂಡಲ ಧರಿಸಿ, ಇತರರನ್ನು ದಂಗುಬಡಿಸಲು ಹೊರಟ ಬೆಕ್ಕು ಸನ್ಯಾಸಿಗಳೆನ್ನುವರು. ಆಶ್ರಯಮಾನಗಳು ಆ ಮಹಿಮರಿಗೆ ದುರ್ಲಭ. ಆದರೆ ಪರಕೀಯರು ಯಾವುದನ್ನು ಹೇಳಿದರೂ, ಆಚರಿಸಿದರೂ ತಥಾಸ್ತು! ಎಂದು ಅದರಂತೆ ವರ್ತಿಸುವರು. ಬಾಹ್ಯದರ್ಶಕ ವಸ್ತುಗಳು ನಿಜವಾದುವುಗಳೆಂದೂ, ಸೂಕ್ಷ್ಮೇಂದ್ರಿಯಗಳಿಂದ ತಿಳಿದುದು ಸುಳ್ಳು ಭಾವನೆಗಳೆಂದೂ ಪಾಠಶಾಲೆಗಳಲ್ಲಿ ಮಕ್ಕಳಿಗೆ ಕಲಿಸುವರು. ರಾಮಾಯಣ, ಮಹಾಭಾರತಾದಿ ಪುರಾಣಗಳು ಕಟ್ಟುಕಥೆಗಳೆಂದೂ, ಶ್ರೀ ಕೃಷ್ಣನು ಇನ್ನೊಬ್ಬ ಶಕುನಿಯೆಂದೂ ಜನರಾಡುವರು; ಮತ್ತು ಶಂಕರಾಚಾರ್ಯ ಮೊದಲಾದ ಯೋಗಿಗಳು ಲೋಕವನ್ನು ಎದುರಿಸಲಾರದೆ, ಕಾಡಿಗೆ ಓಡಿಹೋದ ಬೈರಾಗಿಗಳು ಎಂದು ತಿಳಿಯುವರು. ಇದೇಕೆ? ಅಂದರೆ, ನವನಾಗರಿಕತೆಯ ಮಹಿಮೆಯು ಅಷ್ಟರ ತನಕ ಮೇಲ್ಮೆಯನ್ನು ಪಡೆದಿರುವುದು. ಈ ನಾಗರಿಕತೆಯ ಕಾರಣದಿಂದ ನಮ್ಮ ಧರ್ಮವು ಅಧೋಗತಿಗಿಳಿದು, ಸ್ವಾರ್ಥವು ಹೆಚ್ಚಿ, ಸತ್ವ ಧೈರ್ಯಗಳು ಕುಂದಿ, ಜನರು ಅಧೋಗತಿಗಿಳಿಯುವರು. ಹೀಗಿರುವ ನಮ್ಮ ದುಸ್ಥಿತಿಯನ್ನು ಹೋಗಲಾಡಿಸಲು ಮಹಾ ಪುರುಷರು ಆಗಾಗ್ಗೆ ಅಲ್ಲಲ್ಲಿ ಹುಟ್ಟಿಬಂದು, ಧರ್ಮ

ಸ್ಥಾಪನೆಯನ್ನು ಮಾಡುವರು. ಈ ಸಂತರ ಮಹಿಮೆಯು ಬಹಳ ಮಹತ್ವದ್ದಾಗಿದೆ. ಅವರ ಸದ್ವಾಕ್ಯಗಳಿಂದ ಮನಸ್ಸಿನ ಕ್ಷುದ್ರ ವಿಚಾರಗಳು ಹೋಗಿ, ತುಚ್ಛ ವಿಷಯಗಳ ಮೇಲಿರುವಂಥಾ ನಮ್ಮ ಲೋಲೂಪತೆಯು ಹೋಗಿ, ಈಶ್ವರನ ಮತ್ತು ದೇಶದ ಕಡೆಗೆ ಇರುವಂಥಾ ಕರ್ತವ್ಯ ಜಾಗ್ರತೆಯು ಬರುವುದು. ಈ ಜಾಗ್ರತೆಯಿಂದ ಮನಸ್ಸಿನಲ್ಲಿ ಅನುತಾಪ ಹುಟ್ಟಿ, ದೇವರ ಧ್ಯಾನ ಮತ್ತು ನಾಮಸ್ಮರಣೆ ಮಾಡುತ್ತಾ ಬಂದಲ್ಲಿ, ಈಶ್ವರ ಕೃಪೆಯು ನಿಜವಾಗಿ ದೊರಕುವುದು. ಈ ಕೃಪೆಯೇ ಎಲ್ಲಾ ಉದ್ಧಾರಕ್ಕೂ ಮೂಲಕಾರಣವು. ಅದಿಲ್ಲದೆ ಜನ್ಮವು ವ್ಯರ್ಥ; ಮತ್ತು ನಾವು ಮಾಡಿದ ದೇಶೋದ್ಧಾರಕ ಕಾರ್ಯಗಳು ಸ್ವಾರ್ಥದಿಂದ ಕೂಡಿದ್ದಾಗಿ ನಿರರ್ಥಕವಾಗುವುವು. ಹೀಗೆ ವಿಚಾರ, ಅಭ್ಯಾಸ, ಶ್ರದ್ಧೆ ಮತ್ತು ಅವರಿಂದ ಪಡೆಯುವ ದೇವರ ಪ್ರಸಾದ ಸ್ವೀಕರಿಸಿ, ನಮ್ಮ ದೇಹವನ್ನು ಪಾವನಮಾಡಿ, ದೇಶವನ್ನೂ ಉದ್ಧರಿಸಬಹುದು. ಯಾಕಂದರೆ ನಮ್ಮ ಭಾರತ ಭೂಮಿಯು ಪುಣ್ಯ ಭೂಮಿಯಾಗಿದೆ. ಹೇ! ಭಾರತ ಮಾತೆಯೇ! ನಿನಗೆ ಧರ್ಮವೇ ಜೀವನಪ್ರಾಯವಾಗಿರುವದು, ನಿನ್ನ ಋಷಿಗಳ ಸಾವಿರಾರು ವರ್ಷದ ತಪಪ್ರಭಾವದಿಂದಲೂ, ನಿನ್ನ ವೀರರ ರಕ್ತಧಾರೆಯಿಂದಲೂ, ಸತ್ವಶೀಲರಾದ ಪುತ್ರರ ಪ್ರಭಾವದಿಂದಲೂ ಈ ನಿನ್ನ ಆತ್ಮನಿಧಿಯನ್ನು ನೀನು ಕಾಪಾಡಿಕೊಂಡಿರುವೆ. ಧರ್ಮಬುದ್ಧಿಯ ಸಂಸ್ಕಾರವನ್ನು ಹೆಚ್ಚಿಸಿ, ಅನೇಕ ರಾಜ್ಯಗಳನ್ನೂ, ಸಂಸ್ಥೆಗಳನ್ನೂ ರಚಿಸಿ, ಚಿತ್ರಕಲಾ, ಶಿಲ್ಪಕಲಾ, ವೈದ್ಯಶಾಸ್ತ್ರ, ಗಣಿತಶಾಸ್ತ್ರ, ನೌಕಾಶಾಸ್ತ್ರ, ರಸಾಯನ ಶಾಸ್ತ್ರ ಮುಂತಾದ್ದನ್ನು ಕಂಡುಹಿಡಿದು, ಬೇರೆ ದೇಶದವರಿಗೆ ಅಮೃತಕಲೆಯಂತಿರುವ ಧರ್ಮ ಮತ್ತು ನಾಗರಿಕತೆಯ ವಿಷಯ ನೀನು ಮಾರ್ಗದರ್ಶಕಳಾಗಿರುವೆ. ಎಲ್ಲಕ್ಕೂ ಮೂಲಕಾರಣವಾಗಿ ನಿನಗೆ ಜೀವನದಂತಿರುವ ಈ ಆತ್ಮತತ್ವವನ್ನು ಬರಿದೇ ಬಿಟ್ಟುಕೊಟ್ಟು, ಸುಖಸಾಧನರೂಪವಾದ ಸ್ವಾರ್ಥಜೀವನಕ್ಕೆ ನಿನ್ನ ಶಕ್ತಿಗಳನ್ನೆಲ್ಲಾ ವ್ಯಯಮಾಡಿದರೆ ನೀನೆಂತು ಜೀವಿಸಿರುವಿ? ಈ ಆತ್ಮತತ್ವದ ಬೋಧೆಯಿಂದಲೂ, ದಯಾಪರತೆ, ವಿಶ್ವಾಸ

ಭೂತದಯೆಯಿಂದ ಕೂಡಿದ ನಿನ್ನ ಮನೋವೃತ್ತಿಯಿಂದಲೂ, ಹಿಂದುಸ್ಥಾನದಲ್ಲಿ ಭೂತದಯೆ, ಸತ್ಯ ಮತ್ತು ಅಧ್ಯಾತ್ಮ ಬುದ್ಧಿ ತುಂಬಿರುವದು. ಈ ಸತ್ವ ಗುಣದ ಸಂಸ್ಕಾರದಿಂದಲೇ ನೀನು ಧರ್ಮಕ್ಕೆ ತೌರುಮನೆಯಾದ ಹಿಂದುಸ್ಥಾನವೆಂದು ಎಣಿಸಲ್ಪಡುವಿ; ಅಂಥಾ ಧರ್ಮಸಂಸ್ಕಾರವನ್ನು ಬಿಟ್ಟರೆ ನೀನು ಹಿಂದುಸ್ಥಾನವಾಗಿಯೂ ಧರ್ಮದ ದೇಶವಾಗಿಯೂ ಹೇಗೆ ಬಾಳುವೆ? ಧರ್ಮವೇ ನಮ್ಮ ಪ್ರವೃತ್ತಿಯು; ಧರ್ಮವೇ ನಮ್ಮ ಮೋಕ್ಷಹೇತುವು; ಧರ್ಮವೇ ನಮ್ಮ ತೇಜವು ಮತ್ತು ಧರ್ಮವೇ ನಮ್ಮ ಜೀವನವು. ಆದುದರಿಂದ ನಿನ್ನ ಧರ್ಮತತ್ವದ ವಿಚಾರವೂ ಮತ್ತು ಸತ್ಯಮಾರ್ಗದ ಅವಲಂಬನವೂ ನಿನ್ನ ಕರ್ತವ್ಯವು. ರಾಕ್ಷಸ ಗುಣದಿಂದ ತುಂಬಿರುವ ಈ ನವನಾಗರಿಕತೆಯ ಭರವನ್ನು ನಿಲ್ಲಿಸಿ ಸತ್ಯಪಂಥವನ್ನು ಹರಡಿ, ಶಾಂತಿ ಸುಖವನ್ನು ಕೊಡಬೇಕಾದರೆ ನಿನ್ನ ಆತ್ಮತತ್ವವೂ, ದಯಾಗುಣವೂ, ಶ್ರದ್ಧೆಯೂ, ಅವಶ್ಯಕ. ಆದಕಾರಣ ವಿಷಯ ಲೋಲುಪತೆ, ಸುಖೋಪಭೋಗಗಳ ಮೇಲಿರುವ ಅತಿರಿಕ್ತ ಆಶೆ ವಿಶ್ವಾಸಗಳನ್ನೂ ಮತ್ತು ತಮ್ಮಲ್ಲಿರುವ ಹೇಡಿತನವನ್ನೂ ಅವಿಶ್ವಾಸವನ್ನೂ ಬಿಟ್ಟು ಶ್ರದ್ಧೆಯನ್ನು ಕೈಕೊಳ್ಳಿರಿ. ಕಾರಣ, ನಮ್ಮ ದೇಶವನ್ನು ಎಂಥಾ ಗಂಡಾಂತರದಲ್ಲಿಯೂ ಕಾಪಾಡಿದ ಧರ್ಮದೇವತೆಯಾದ ಗಾಯತ್ರೀ ವೇದ ಮಾತೆಯು ನಿಮ್ಮನ್ನು ಜಾಗ್ರುತೆಪಡಿಸಲಿಕ್ಕೆ ಅನೇಕ ಸಮರ್ಥರನ್ನು ಕಳುಹಿಸಿರುವಳು. ಈ ನಮ್ಮ ದೇಶೋನ್ನತಿಗೆ ಅನುಕೂಲವಾಗಿ ವಿವೇಕಾನಂದ, ಜಠಾರ ಮತ್ತು ಗಣೇಶಯೋಗಿ ಮುಂತಾದ ಮಹಾತ್ಮರು ಆತ್ಮತತ್ವದ ಅಭ್ಯಾಸಮಾರ್ಗವನ್ನು ತೋರಿಸಿಕೊಟ್ಟಿರುವರು. ಅದರ ದಿಗ್ದರ್ಶನವನ್ನೂ, ಆತ್ಮತತ್ವದ ಮಹತ್ವವನ್ನೂ ಮತ್ತು ಅಭ್ಯಾಸಕ್ರಮವನ್ನೂ ಇಲ್ಲಿ ವಿವೇಚನೆ ಮಾಡಿದೆ. ಆದರೆ ಎಲ್ಲಾ ಅದ್ಭುತ ಕಾರ್ಯಗಳಿಗೂ ಭಕ್ತಿ ಅಥವಾ ಶ್ರದ್ಧಾಯುಕ್ತ ಭಾವನೆಯ ಅಭ್ಯಾಸವೇ ಮುಖ್ಯ ಕಾರಣವು. ತಾನು ಅಶಕ್ತ ಪಾಮರನಾಗಿ ಹೊಟ್ಟೆ ಹೊರಕೊಳ್ಳುವ ಹಿಂದೂ ಎಂಬ ಕುತ್ಸಿತ ಭಾವನೆಯನ್ನು ಒಂದು ಕಡೆಗೆ ಬಿಟ್ಟುಕೊಟ್ಟು ನಿಜಶಕ್ತಿಯಿಂದ ಕೂಡಿದ ಚೈತನ್ಯರೂಪ ಆತ್ಮನು ತಾನು—"ಸೋಹಂ ಅಸ್ಮಿ, ಸೋಹಂ ಅಸ್ಮಿ"

ಎಲ್ಲಾ ಶಕ್ತಿಯಿಂದ ಕೂಡಿದ, ತೇಜೋರೂಪ ಆತ್ಮನು ತಾನು. ನಾನು ಬುದ್ಧನು ಆಗಿ ದೇಹದ ಗುಣಗಳಿಗೆ ಅತೀತನಾಗಿದ್ದೇನೆ. ಹೀಗೆ ಸದ್ಭಾವದಿಂದ ತನ್ನನ್ನು ನೋಡಲು ರೋಗ, ಮಾಲಿನ್ಯ, ಅಶಕ್ತತೆ ಎಂಬುವು ಎಲ್ಲಿ ಇರುವವು? ಹೀಗೆ 'ಸೋಹಂ ಆಸ್ಮಿ' ಎಂಬ ದೃಢಭಾವನೆಯನ್ನು ಇಟ್ಟು ಮನಸ್ಸಿನಲ್ಲಿ ಧೈರ್ಯ, ಉದಾರತೆ, ನಿಶ್ಚಲತೆ, ಪ್ರಶಾಂತತೆಗಳನ್ನು ಸಾಧಿಸುತ್ತಾ ದೇಹದ ಜಡಭಾವವನ್ನು ಬಿಟ್ಟು ಉಚ್ಚಭಾವನೆಯಿಂದ ಎಲ್ಲವನ್ನೂ ಚೇತನಾರೂಪವಾಗಿ ಮಾಡಬೇಕು. ಇದಾದರೂ ಇಡೀ ಜನ್ಮದ ಸಾಧನೆಯಿಂದ ಲಭಿಸುವದು ಕಷ್ಟವು. ಈ ಸಾಧನೆಯಲ್ಲಿ ಅನೇಕ ತರ ಗತಿಗಳಿರುವದು. ಆರಂಭದಲ್ಲಿ ದೇಹವನ್ನು ಬ್ರಹ್ಮಚರ್ಯ ಮತ್ತು ನಿಯಮದಿಂದ ಸಶಕ್ತವಾಗಿ ಮಾಡಿ, ಮನಸ್ಸನ್ನು ಧಾರಣೆಯಿಂದ ಉಜ್ವಲವಾಗಿ ಮಾಡಲು ಪ್ರಯತ್ನ ಮಾಡಬೇಕು. ಎಲ್ಲವೂ ಪ್ರಯತ್ನದಿಂದ ಸಾಧ್ಯವು. ಆತ್ಮನು ಪ್ರಯತ್ನದಿಂದ ಸಾಧಿಸಲು ದೇಹದ ಅಶಕ್ತತೆ ಮತ್ತು ಮಾಲಿನ್ಯ ಹೋಗಿ, ಧೈರ್ಯ, ಶಾಂತತೆ ಮತ್ತು ವಿಶ್ವಾಸವು ಹೆಚ್ಚುವದು. ಆದುದರಿಂದ ಎಲ್ಲರು ತಾನು ಚೈತನ್ಯರೂಪನಾದ ಶುದ್ಧ ಆತ್ಮನು ಎಂಬ ಭಾವನೆಯನ್ನು ದೃಢಮಾಡಲು ನೋಡಬೇಕು. ಆದರೆ ನಿರಾಕಾರ ರೂಪದಲ್ಲಿ ಭಾವನೆಯು ಇಡುವದು ಸಾಮಾನ್ಯಜನರಿಗೆ ಕಷ್ಟವಾದುದರಿಂದ ದೇವರ ಸಗುಣರೂಪದ ಸ್ಮರಣೆಯನ್ನು ನಡಿಸಬೇಕು. ಇದಕ್ಕಾಗಿ ಪೂರ್ವದಲ್ಲಿ ರಾಮದಾಸ, ತುಕಾರಾಮ, ಏಕನಾಥ, ಶಂಕರಾನಂದ, ಸೋಹಿರೋಬನಾಥ ಎಂಬವರು ದೇವರ ನಾಮವನ್ನು ಪ್ರೇಮದಿಂದ ಸ್ಮರಣೆಮಾಡಲು ಉಪದೇಶಿಸಿರುವರು. ಈ ಪ್ರೇಮವು ಹೆಚ್ಚಿತೆಂದರೆ ರಾಮತೀರ್ಥನಂತೆ ದೇಹಸ್ಮರಣೆ ಹೋಗಿ, ವ್ಯಕ್ತಿಯು ಲೀನವಾಗಿ ಆನಂದರೂಪದಲ್ಲಿ ಕುಣಿಯುವನು. ಈ ಕಾರಣದಿಂದ ಪ್ರತಿಯೊಬ್ಬನೂ ಪಾತ್ರಾನುಸಾರ ಇವರು ಕೊಟ್ಟ ಗೀತವನ್ನು ಹಾಡಿ ಪ್ರೇಮಸಂಸ್ಕಾರವನ್ನು ಹೆಚ್ಚಿಸಬೇಕು. ಹೀಗೆ ಪ್ರೇಮಸಂಸ್ಕಾರಗಳು ಹೆಚ್ಚಿತೆಂದರೆ ದೇವತಾಸ್ಫೂರ್ತಿಯು ಸ್ಫೂರ್ತಿಯಿಂದ ಕೂಡಿ ಎಲ್ಲರಲ್ಲಿಯೂ ಪ್ರೇಮವನ್ನೂ ವಿಶ್ವಾಸವನ್ನೂ ಹರಡು

ವನು. ಇಂಥಾ ಸುಪುತ್ರರು ಅನೇಕರು ಅಲ್ಲಲ್ಲಿ ಆತ್ಮ ಜಾಗ್ರತಿಯ ಕೆಲಸವನ್ನು ಕೈಕೊಂಡರೆ, ದೇಶದ ಉದ್ಧಾರದ ಕೆಲಸವು ಸುಲಭವಾಗಿ ನಡೆಯುವದು. ಇದಕ್ಕೋಸ್ಕರ ಪ್ರತಿಯೊಬ್ಬನೂ ಜಾಗ್ರತೆಯಿಂದ ನಿಜ ಶ್ರೇಯಸ್ಸಿನ ಆರ್ಯರ ಸಾಧನಾರೂಪ ಮಾರ್ಗವನ್ನು ಹಿಡಿಯಬೇಕು. ಇದಕ್ಕಾಗಿಯೇ "ವೀರ್ಯಮಸಿ ವೀರ್ಯಂ, ಬಲಮಸಿ ಬಲಂ, ಓಜೋಸಿ ಓಜೋ, ಮಯಿದೇಹಿ ಸಹೋಸಿ ಸಹೋಮಯಿ ದೇಹಿ." "ಹೇ ಮಾತೆಯೇ! ನೀನು ಶಕ್ತಿರೂಪಳಾಗಿದ್ದು ನನ್ನ ದೇಹವು ಧೃಡವೂ ಸತೇಜವೂ ಆಗುವ ಹಾಗೆ ಮಾಡು ಮತ್ತು ನನ್ನ ಮನಸ್ಸು ಶುದ್ಧವಾಗಿದ್ದು ಉಚ್ಚ ಭಾವನೆಯಿಂದ ಕೂಡುವಂತೆ ಮಾಡು ಮತ್ತು ನನ್ನ ಬುದ್ಧಿಯಲ್ಲಿ ಶಕ್ತಿ ರೂಪವಾದ ಓಂಕಾರವು ಸ್ಫುರಣವಾಗಿ ಎಲ್ಲಾ ಭೇದಭಾವಗಳನ್ನು ಅಳಿಸಲಿ" ಎಂದು ಪ್ರತಿಯೊಬ್ಬ ಆರ್ಯಪುತ್ರನು ಪ್ರಾರ್ಥಿಸಬೇಕು.

---

# ಅನುಕ್ರಮಣಿಕೆ.



## ಪದ್ಯಮಾಲಿಕೆ.





# ಶುದ್ಧಪತ್ರಿಕಾ.

| ಪು:ನಂ. | ಪಂಕ್ತಿ | ಅಶುದ್ಧ. | ಶುದ್ಧ. |
|---|---|---|---|
| 2 | 2ನೇ | ಬರುಲು | ಬರಲು |
| | 12 | ನಮ್ಮಲಿಲ್ಲಾ | ನಮಲ್ಲಿಲ್ಲಾ |
| 3 | 12 | ಯುದ್ಧವೆ | ಯುದ್ಧವೇ |
| 4 | 8 | ಯತಿಸ | ಯತ್ನಿಸ |
| 5 | 21 | ವಿದ್ಯ | ವಿದ್ಯಾ |
| 6 | 14 | ಅನುಸರಿಸ | ಅನುಸರಿಸಿ |
| 7 | 20 | ಸಹೃದತೆಯು | ಸುಹೃದತೆಯು |
| 8 | 20 | ತನ | ತನ್ನ |
| 19 | 14 | ಪ್ರಸಿದ | ಪ್ರಸಿದ್ಧ |
| 19 | 17 | ಆಜ್ಞಾತ | ಆಜ್ಞಾ |
| 20 | 3 | ಜಯಿಸುವದು | ಲಯಿಸುವದು |
| 20 | 6 | ಜಿತ್ಸ್ವರೂಪ | ಚಿತ್ಸ್ವರೂಪ |
| 20 | 20 | ಪಾಲನ್ನು | ಸಾಲನ್ನು |
| 31 | 3 | ಕರ್ತುಃ | ಕರ್ತೃಃ |
| 37 | 14 | ಆತ್ಮನುಭವದ | ಆತ್ಮಾನುಭವದ |
| 38 | 13 | ಸಾಕ್ಷಾತ | ಸಾಕ್ಷಾತ್ |
| 38 | 18 | ಎಣಿಸದೆ | ಎಣಿಸಿದ |
| 40 | 23 | ಬ್ರಹ್ಮರು | ಬ್ರಹ್ಮರೂಪ |
| 41 | 18 | ಮುರಾರಿಯೊಳೈಕ್ಯಾವ | ಮುರಾರಿಯೊಳೈಕ್ಯವ |
| 41 | 20 | ಮನ್ಮಲಿದು | ಮನವಲಿದು |
| | 24 | ಜನಸ್ಸಿದೆ | ಜನಸಿದೆ |
| | 24 | ನಿರ್ಮಳ | ನಿರ್ಮಲ |
| 42 | 25 | ಸರೋಜಿಂ | ಸರೋಜಂ |
| 43 | 8 | ರಹನೆವಾಲ | ರಹನೇವಾಲಾ |

| ಪಾನು. | ಪಂಕ್ತಿ. | ಅಶುದ್ಧ. | ಶುದ್ಧ. |
|---|---|---|---|
| | 9 | ಪಾಯು | ಪಾಯಾ |
| | 11 | ರಂತಹೈ | ರಂಕಹೈ |
| | 20 | ಸತ್ತು | ಸೆತ್ |
| 47 | 19 | ಏಕಜಿ | ಏಕಚಿ |
| | 19 | ದುರ್ಥರ | ದುರ್ಧರ |
| | 20 | ಕೀರ್ತಣ | ಕೀರ್ತನ |
| 49 | 5 | ಝುಣತ್ಕಾರಿಣೀ | ಝುಣತ್ಕಾರಿಣಿ |
| 50 | 8 | ಬೇಡಿದವರಿಗೆ | ಬೇಡಿದವರಿಗಿ |
| 5 | 17 | ಜಿಂಹೆ | ಜಿಹ್ವೆ |
| 53 | 8 | ನಮ್ಮಮ್ಮ | ನಮ್ಮಮ್ಮಾ |
| 63 | 19 | ಜಠರೇ | ಜಠರೀಂ |
| | | ರಕ್ಷಿಯಲಿಂ | ರಕ್ಷಿಯಲೆಂ |
| | 23 | ವಾಜಾ | ಮಾಝಾ |
| 64 | 5 | ದೇಶೀ | ದೇಸಿ |
| | 12 | ಶ್ಯಾವೇ | ಶ್ಯಾಮೇ |
| | 15 | ಭುವನಾಥಾರಾ | ಭುವನಾಧಾರಾ |
| | 19 | ನಮಿಕಾ | ನಮಿತಾ |
| 65 | | ರಕ್ಷಿಸೆಂನಾನು | ರಕ್ಷಿಸೆನ್ನನು |
| 97 | 13 | ಅವಧೂತ | ಆವನೂತ |
| 72 | 10 | ಏಸಾ | ಐಸಾ |
| 78 | 8 | ಭಕಿ | ಭಕ್ತಿ |



# ಹಿಂದುಸ್ಥಾನದ ಧರ್ಮ.



ಯಾವುದಾದರೊಂದು ದೇಶವು ಉನ್ನತಿಯನ್ನು ಪಡೆಯಬೇಕಾದರೆ ಅದಕ್ಕೊಂದು ಮಾರ್ಗವಿರುವುದು. ಅಂತಹ ಮಾರ್ಗವನ್ನು ಅನುಸರಿಸಿದಲ್ಲದೆ ಅಭಿವೃದ್ಧಿ ಸಾಧ್ಯವಲ್ಲ. ನಮ್ಮ ಭಾರತಭೂಮಿಯು ಧರ್ಮವೆಂಬುದನ್ನೇ ಮುಂದಿಟ್ಟುಕೊಂಡು ಉಚ್ಛ್ರಾಯಸ್ಥಿತಿಯನ್ನು ಪಡೆಯಲು ಪ್ರಯತ್ನಿಸಿ ಸಫಲತೆಯನ್ನು ಹೊಂದಿದುದು ಪೂರ್ವ ಚರಿತ್ರೆಗಳಿಂದ ಕಂಡು ಬರುತ್ತದೆ. ಆದರೆ ಈಗೇಕೆ ಅಂತಹ ಸ್ಥಿತಿಯು ಅದಕ್ಕಿಲ್ಲ? ಧರ್ಮವನ್ನು ಅಷ್ಟು ಬಿಗಿಯಾಗಿ ಹಿಡಿದಿದ್ದರೂ, ಈ ದೇಶದ ಜನರು ನಿಶ್ಶಕ್ತತೆಯಿಂದಲೂ, ಅಧೀನತೆಯಿಂದಲೂ, ದಾರಿದ್ರ್ಯದಿಂದಲೂ, ಪೀಡಿತರಾಗಿ ದುರವಸ್ಥೆಯ ದುಸ್ಸಹವಾದ ಯಾತನೆಗೆ ಈಡಾಗಿರಲು ಕಾರಣವೇನು? ಧರ್ಮವನ್ನು ಅನುವರ್ತಿಸುವುದರಿಂದ ಎಷ್ಟುಮಾತ್ರಕ್ಕೂ ಅವನತಿಯುಂಟಾಗಲಾರದು. ಧರ್ಮಾನುವರ್ತಿಗಳಾಗಿದ್ದ ನಮ್ಮ ಪೂರ್ವಜರು ಹಲವು ರಾಜ್ಯಗಳನ್ನು ಸ್ವಾಧೀನಮಾಡಿಕೊಂಡು, ಕಲಾಕೌಶಲ್ಯ ಸಕಲ ವಿಧಗಳಲ್ಲಿಯೂ, ಮಹತ್ವಿಕೆಯನ್ನು ಪಡೆಯುವಂತೆ ಸಾಧಿಸಿದರು. ಅವರು ಕಟ್ಟಿಸಿದ ದೇವಾಲಯಗಳೇ ಮೊದಲಾದ ಕೆಲವು ಕಟ್ಟೋಣಗಳು ಅವರ ಕಾಲದ ಶಿಲ್ಪಿಕೌಶಲ್ಯಕ್ಕೆ ನಿದರ್ಶನಗಳಾಗಿ ಈಗಲೂ ನೆಲಸಿವೆ. ಅಶೋಕ, ವಿಕ್ರಮಾದಿತ್ಯ, ಪುಲಿಕೇಶಿನ್, ಹರ್ಷ, ಮುಂತಾದ ಚಕ್ರವರ್ತಿಗಳು ಭಾರತಭೂಮಿಯೆಲ್ಲವನ್ನೂ ಗೆದ್ದುದಲ್ಲದೆ ಭಾರತೀಯರಲ್ಲಿ ಶಮ ದಮಾದಿ ಸದ್ಗುಣಗಳು ಸ್ಥಿರಗೊಳ್ಳುವಂತೆ ಹಲವು ಬಗೆಯಾಗಿ ಪ್ರಯತ್ನಿಸುತ್ತಿದ್ದರು.

ಜನರಲ್ಲಿ ಗುರು ದೈವ ಭಕ್ತಿಯೂ, ಧರ್ಮನಿಷ್ಠೆಯೂ, ತಿಲಮಾತ್ರವೂ ಶಿಥಿಲವಾಗಿರಲಿಲ್ಲ. ಆದರೆ ಅನಂತರದ ರಾಜಪುತ್ರರುಗಳು

ಸ್ವಾರ್ಥಪರಾಯಣರಾಗಿ ಧರ್ಮಕ್ಕೆ ಲೋಪವನ್ನು ತಂದುಕೊಂಡು ದರಿಂದ ಮುಸಲ್ಮಾನರಿಗೆ ಬರುಲು ಆಸ್ಪದವಾಯಿತು. ಮುಸಲ್ಮಾನರ ಕಾಲದಲ್ಲಿ ಕೂಡ ಮೊದಲು ಮೊದಲು ಧರ್ಮಕ್ಕೆ ವಿಶೇಷ ಶಿಥಿಲತ್ವವು ಬರಲಿಲ್ಲ. ಕ್ರಮೇಣ ಹಿಂದೂಗಳ ದುರಾಶೆಯಿಂದಲೂ, ಅಧಿಕಾರಪ್ರಾಪ್ತಿಯಿಂದಲೂ, ಧರ್ಮಕ್ಕೆ ಕುಂದುಂಟಾಗುವ ಪ್ರಸಂಗ ಒದಗಿತು. ಅಷ್ಟರಲ್ಲಿ ಧರ್ಮವೇ ಮೂರ್ತಿಮತ್ತಾದಂತೆ ರಾಮದಾಸರೂ, ಶಿವಾಜಿಯೂ, ಅವತರಿಸಿದರು. ಧರ್ಮ, ಸಂಘ, ವೀರ್ಯ—ಎಂಬ ಶಕ್ತಿತ್ರಯಗಳನ್ನು ಕೊಟ್ಟು, ಅಧ್ಯಾತ್ಮಜ್ಞಾನ, ಭಕ್ತಿ, ಪ್ರೇಮ, ಧರ್ಮಸಾಧನ—ಇವೇ ಅವರ ಬೋಧಗಳು. ಭಾರತಭೂಮಿಯನ್ನು ಉದ್ಧರಿಸಲು ಆ ಮಹನೀಯರುಗಳು ಬಹುವಾಗಿ ಸಾಧಿಸಲಿಲ್ಲವೆ? ನಮ್ಮ ಹಿರಿಯರ ಉಪಾಸನಾದೇವತೆಯಾದ ಅಂತಹ ಶಕ್ತಿಯು ಈಗೇಕೆ ನಮ್ಮಲ್ಲಿಲ್ಲ? ನಮ್ಮ ಆಶಾವ್ಯಸನಗಳೂ, ಪರದೇಶದವರ ಮೇಲಿರುವ ನಮ್ಮ ಮಿತಿಮೀರಿದ ಅಭಿಮಾನವೂ, ಸ್ವದೇಶದಲ್ಲಿರುವ ನಮ್ಮ ಜಿಗುಪ್ಸೆಯೂ, ಆ ದೇವತೆಯನ್ನು ದೂರಕ್ಕೆ ಓಡಿಸಿಬಿಟ್ಟಿವೆ. ಉನ್ನತವಾದ ಅಧ್ಯಾತ್ಮ ವಿಚಾರ, ಪ್ರೇಮ ಸಾಧನ, ಇವೆಲ್ಲವನ್ನೂ ಬಿಟ್ಟು ತುಚ್ಛವಾದ ಪರಕೀಯವಾದ ಬೀಡಿ, ಚುಟ್ಟ, ಮೊದಲಾದ ಧೂಮ್ರಪಾನಕ್ಕೆ ತೊಡಗಿದ್ದೇವೆ. ನಮ್ಮ ಆಚಾರಗಳ ಮೇಲೆ ನಮಗಿರುವ ದುರಭಿಮಾನ, ನಮ್ಮವರ ವಿಷಯ ಅಸೂಯೆ, ಮತ್ತು ತುಚ್ಛೀಕಾರ, ಪರಕೀಯರ ಮೇಲೆ ಅತಿರೇಕ ಮರ್ಯಾದೆ ಇವೇ ನಮ್ಮ ಅವನತಿಗೆ ಕಾರಣಗಳಲ್ಲದೆ ಮತ್ತೆ ಬೇರೆಯಲ್ಲ. ಹೇ! ಭಾರತಮಾತೆ! ಧರ್ಮಕ್ಕೂ, ಜ್ಞಾನಕ್ಕೂ, ಮೂಲಕಾರಣಗಳು ನೀನಾಗಿರುತ್ತಿ. ಆದರೂ ನಿನ್ನ ಮಕ್ಕಳು ಸ್ವಚ್ಛಂದ ವರ್ತನೆಯಿಂದ ಅಧಃಪತನಕ್ಕೆ ಪಾತ್ರರಾಗಿದ್ದಾರೆ. ಸ್ವಾರ್ಥವ್ಯಸನಗಳನ್ನು ಹಚ್ಚಿಕೊಂಡು .ದೈವವನ್ನೂ, ಜನರನ್ನೂ, ದೇವರನ್ನೂ, ಮರೆತುಬಿಟ್ಟು ರೋಗಗಳಿಂದಲೂ, ಬಡತನದಿಂದಲೂ, ತುಂಬ ಪೀಡಿತರಾಗಿಲ್ಲವೆ? ಅವರ ದುರವಸ್ಥೆಯ ಹಂಬಲ ನಿನಗಿಲ್ಲವೆ? ಅಹುದು. ಸರ್ವವನ್ನು ಪರಿಪಾಲಿಸುವ ಮಾತೆಯು ಮಕ್ಕಳ ಆರ್ತನಾದಕ್ಕೆ ಮನಕರಗಿ ಧರ್ಮವು ಪುನ

ರುಜ್ಜೀವಿಸುವಂತೆ ಮಾಡುವುದಕ್ಕಾಗಿ ಆಚಾರ್ಯಶ್ರೇಷ್ಠರನ್ನೂ, ಕಳು ಹಿಸುವಳು.

ಯಾವಾಗ ವಿವೇಕಾನಂದ ಸ್ವಾಮಿಗಳವರು ಅಧ್ಯಾತ್ಮನಿಧಿಯಲ್ಲಿ ಪ್ರಬಲರಾಗಿ, ದ್ರವ್ಯಬಲದಿಂದ ಮತ್ತರಾದ ಪರದೇಶೀಯರಿಗೆ ಧರ್ಮ ಮಾರ್ಗವನ್ನು ಹೇಳಿರುವರೊ, ಅಂದಿನಿಂದಲೇ ನಮಗೆ ಸ್ವಾತಂತ್ರ್ಯವು ಸಿಕ್ಕಿದಂತಾಯಿತು. ಆ ಧರ್ಮಮಾರ್ಗವನ್ನವಲಂಬಿಸುವುದೇ ನಮ್ಮ ಕರ್ತ ವ್ಯವು. ಇದಕ್ಕೆ ಜ್ಞಾನವೇ ಮುಖ್ಯವಾದುದು. ಈ ಜ್ಞಾನಸಾಧನೆ ಯಿಂದಲೇ ವಿಚಿತ್ರವಾದ ಕಲೆಗಳೂ, ಅದ್ಭುತವಾದ ಗೋಳೀಯ ಮೊದ ಲಾದ ಆಧುನಿಕ ಶಾಸ್ತ್ರಪರಿಶೋಧನೆಯ ಫಲಗಳೂ, ವಸ್ತುಶಕ್ತಿಯ ಪ್ರದರ್ಶನವೂ, ಪ್ರಕಾಶಮಾನವಾಗುತ್ತವೆ.

ಆದರೆ ಆತ್ಮವೃದ್ಧಿಯನ್ನು ಬಿಟ್ಟು ನಡೆದರೆ, ಇದರಿಂದ ಹಾನಿಯೂ ಒದಗಬಹುದೆಂಬುದಕ್ಕೆ ಈ ಶತಮಾನದ ಘೋರ ಯುದ್ಧವೆ ಒಂದು ನಿದ ರ್ಶನವಾಗಿದೆ. ಈ ಜ್ಞಾನದಲ್ಲಿ ದೇಹಘಟದ ವಿಚಾರವು ಮುಖ್ಯವಾ ದುದು. ಜನರು ತಮ್ಮನ್ನು ಮರೆತು ಅಹಂಭಾವವನ್ನು ಪಡೆದಿರು ವುದಕ್ಕೂ, ಅಧೋಗತಿಯಲ್ಲಿ ಹಂಬಲಿಸುವುದಕ್ಕೂ, ತಮ್ಮ ಅಜ್ಞಾನವೇ ಕಾರಣ. ಸ್ವಲ್ಪ ವಿಚಾರಮಾಡಿದ್ದಲ್ಲಿ ನಮ್ಮ ದೇಹವು ಪಂಚಭೂತ ಗಳಿಂದ ಮಾಡಲ್ಪಟ್ಟಿದೆ ಎಂತ ತಿಳಿಯುತ್ತದೆ. ಅರಸನಿಂದ ಕೂಲಿಯಾಳಿನ ತನಕವೂ, ಎಲ್ಲರೂ ಮಣ್ಣಿನಿಂದ ಹುಟ್ಟಿ ಮಣ್ಣಿಗೆ ಕೂಡಿಹೋಗುವರು. ಹೀಗಿರುತ್ತಿರಲು ನಶ್ವರಗಳಾದ ಸುಖ, ದ್ರವ್ಯ, ಕಾಮಿನಿ ಮೊದಲಾದ ಭೋಗಗಳಲ್ಲಿ ಭ್ರಮಿಸಿ ಹೋಗುವದು ಕೇವಲ ನಿಷ್ಪ್ರಯೋಜಕವಾದುದು. ಮನುಷ್ಯನಿಗೆ ಆತ್ಮವಿದ್ಯೆಯೇ ಭೂಷಣ. ಆದರೆ ಈ ಜ್ಞಾನವು ಭಕ್ತಿ ಸಾಧನೆಯನ್ನು ಮಾಡಿ ವೈರಾಗ್ಯ ಹುಟ್ಟದ ವಿನಾ ಲಭಿಸದು. ಅದ ರಿಂದಲೇ ದೇಹಕ್ಕೆ ಮಾನ. ಅಂತಹ ಜ್ಞಾನ ಸಾಧನೆಮಾಡುವುದಕ್ಕೆ ಮೊದಲು ಭಕ್ತಿಪ್ರೇಮಗಳ ಅಭ್ಯಾಸಮಾಡಿ ಭೂತದಯೆಯು ಉದಿಸು ವಂತೆ ಮಾಡಿಕೊಳ್ಳಬೇಕು.

ಸಾಧುಶ್ರೇಷ್ಟರ ಪವಿತ್ರ ಪದ್ಯಮಾಲೆಗಳಿಂದಲೂ, ಭಕ್ತಿರಸಪೂರಿತ ಭಜನೆಗಳಿಂದಲೂ, ಪವಿತ್ರವಾಣಿಯಿಂದಲೂ, ನಮ್ಮೊಳಗಿನ ಅಹಂಕಾರವು ನಾಶವಾಗಿ ನಮ್ಮಲ್ಲಿ ಕರುಣೆಯೂ, ಭೂತದಯೆಯೂ, ಹೆಚ್ಚುವದು. ಇದರಿಂದ ಮುಂದಕ್ಕೆ ದೇಶವೃದ್ಧಿಯು ಬಲು ಸುಲಭದಿಂದ ಸಾಗುವದು.

ಯಾಕೆಂದರೆ, ಸಾರ್ವಜನಿಕ ಸಮ್ಮೇಲನದ ನಿರ್ಣಯಗಳು ಪ್ರೇಮ ವಿರುವುದರಿಂದ ನಿಷ್ಫಲವಾಗಲಾರವು. ಎಲ್ಲಕ್ಕೂ ಮೂಲಕಾರಣವಾದ ಆತ್ಮಶ್ರದ್ಧೆಯೂ, ಭೂತದಯೆಯೂ, ನಮ್ಮಲ್ಲಿ ಕಡಿಮೆಯಾಗಿರುವುದರಿಂದ ನಾವು ಅದನ್ನು ಹೆಚ್ಚಿಸಲು ಯತ್ನಿಸಬೇಕು. ನಾನಕ, ಕಬೀರ, ರಾಮಾನಂದ, ರಾಮಕೃಷ್ಣ ಪರಮಹಂಸರಂತಹ ಸಾಧುಗಳು ತಮ್ಮ ಪ್ರೇಮ ಪೂರಿತ ದಿವ್ಯಜ್ಞಾನವನ್ನು ಬೋಧಿಸಲು ಜನರಲ್ಲಿ ವಿಶ್ವಾಸವೂ, ಕರ್ತತ್ವ ಶಕ್ತಿಯೂ, ಹುಟ್ಟಿ ದೇಶವನ್ನು ದೃಢಪಡಿಸಲು ಅವಕಾಶವಾದಂತಾಯಿತು. ಈಗ ದೇಶವು ಪುನಃ ಜಾಗ್ರತೆಯನ್ನು ಪಡೆಯಬೇಕಾದ ಕಾಲವು ಬಂದಿದೆ. ಎಲ್ಲಿ ನೋಡಿದರೂ ವಿದ್ಯೆಗೂ, ಕೈಗಾರಿಕೆಗೂ ನೂತನವಾದ ರೂಪಗಳನ್ನು ಕೊಡುವ ಪ್ರಯತ್ನವು ಕಂಡುಬರುತ್ತದೆ. ಮಹಂತರಾದವರೂ, ಮಹಾತ್ಮ ಗಾಂಧಿಯಂತಹ ಕಾರ್ಯದಕ್ಷರೂ, ರಾಮಕೃಷ್ಣರಂತಹ ಸಾಧುಗಳೂ ಇಂತಹ ಕೆಲಸಕ್ಕೆ ಕೈಹಾಕಿದ್ದಾರೆ.

ಇದು ಸಫಲವಾಗಬೇಕಾದರೆ ನಿಮ್ಮ ವಿಶ್ವಾಸ ಮತ್ತು ಪ್ರೇಮ ಯುಕ್ತವಾದ ಆತ್ಮಸಾಧನವೇ ಆವಶ್ಯಕ.

ಇಂತಹ ದಿವ್ಯ ಜಾಗ್ರತೆಯ ಕಾಲವು ಒದಗಿದಲ್ಲಿ ಯಾರಿಗೆ ತಾನೇ ಆಲಸ್ಯದಿಂದಿರುವುದಕ್ಕಾದೀತು. ಆದುದರಿಂದ ಸಾಧುಗಳ, ಹಾಗೂ ವೀರರ ಉಜ್ವಲವಾದ ಮಾತುಗಳನ್ನು ಕೇಳಿಕೊಂಡು ನಮ್ಮ ಆತ್ಮೀಯ ಜಾಗ್ರತೆಯನ್ನು ಮಾಡಿಕೊಳ್ಳುವುದೇ ನಮ್ಮ ಈಗಿನ ಧ್ಯೇಯ (ideal) ವಾಗಿದೆ.

# ಅಭ್ಯಾಸಯೋಗ ಅಥವಾ ಕರ್ಮಯೋಗ.



ಆತ್ಮಶಕ್ತಿಯನ್ನು ಮುಂದಾಗಿ ತಿಳಿದು ವೃದ್ಧಿಗೊಳಿಸುವುದೇ ಆರ್ಯರಾದ ನಮ್ಮಗಳ ಧರ್ಮವು. ಈ ಧರ್ಮದಿಂದಲೇ ಆರ್ಯಮತವು ಉನ್ನತಸ್ಥಿತಿಯನ್ನು ಪಡೆದುದು; ಕೆಲವರು ವೃಥಾ ಭೀಕರ ಸ್ವರೂಪವಾದ ಈ ಆತ್ಮಸಾಧನೆಯಿಂದ ನಾವು ಶಕ್ತಿಹೀನರಾದೆವು ಎಂದೆಣಿಸಬಹುದು. ಮತ್ತು ಕೆಲವರು ಭಾರತಭೂಮಿಯು ಪ್ರಾಚೀನಕಾಲದಲ್ಲಿ ಸಾಮರ್ಥ್ಯ ವನ್ನು ತೋರ್ಪಡಿಸಿದ್ದು ಹೌದು. ಆದರೆ ಒಬ್ಬ ಬುದ್ಧ ಮತ್ತು ಅಶೋಕ ನಿಂದ ನಮ್ಮ ಉತ್ಕರ್ಷತೆಯ ಮಾರ್ಗವು ಕೈಗೂಡುವುದೊ? ಎಂದು ಶಂಕೆ ಬರಬಹುದು. ಆದರೆ ಈ ಶಂಕೆಯು ನಿರರ್ಥಕವು. ಕಾರಣ ಹಿಂದು ಧರ್ಮವು ಪರಲೋಕವನ್ನು ಮಾತ್ರ ಹೊಂದಿಲ್ಲವು, ಇಹಲೋಕದ ವ್ಯವಹಾರವನ್ನು ಸಹಾ ಕೂಡಿರುವುದು. ಲೋಕವನ್ನು ತ್ಯಜಿಸುವುದು ಈ ಧರ್ಮದ ಉದ್ದೇಶವಾಗಿರದೆ ಅರ್ಥವನ್ನೂ, ಪರಾರ್ಥವಾದ ಚೈತನ್ಯ ವನ್ನೂ ಪಡೆಯುವುದು ಇದರ ಮುಖ್ಯ ಉದ್ದೇಶವು.

ಸನಾತನ ಧರ್ಮವು ರಾಜ್ಯದ ಸೌಭಾಗ್ಯವನ್ನೂ, ಅತಿ ಶ್ರೇಯಃ ಸಂಪತ್ತನ್ನೂ ಸಹ ಅನುಕೂಲಿಸಿ ಕೊಡುವುದು. ಹೀಗೆ ಧರ್ಮಬಲ ದಿಂದಲೇ ಆರ್ಯರು ಲೋಕಸಂಗ್ರಹವನ್ನು ಮಾಡಿ ದೊಡ್ಡ ದೊಡ್ಡ ಪಟ್ಟಣಗಳನ್ನೂ, ರಾಜ್ಯಗಳನ್ನೂ ಕಟ್ಟಿದರು. ಆರ್ಯಶೂರರೂ, ಋಷಿ ಗಳಾದ ಮಹನೀಯರೂ, ಹಿಂದುಸ್ಥಾನದ ಏಳಿಗೆಯ ಕಾಲದಲ್ಲಿಯೂ ಬಂದು ಒದಗಿದ ಅಧ್ಯಾತ್ಮ ಶಕ್ತಿಯನ್ನೂ, ಕರ್ತೃತ್ವ ಶಕ್ತಿಯನ್ನೂ ಹೆಚ್ಚಿಸಿ, ಹಿಂದುಸ್ಥಾನದ ಗೌರವವನ್ನು ಹೆಚ್ಚಿಸಲಿಲ್ಲವೆ? ಅಶೋಕ, ಸಂಗ್ರಾಮ ಸಿಂಹ, ಪ್ರತಾಪಸಿಂಹ, ಇವರು ಧರ್ಮಬಲದಿಂದಲೇ ಸ್ವರಾಜ್ಯಸ್ಥಾಪನೆ ಮಾಡಿ ವಿದ್ಯೆ, ಕಲಾ, ಕೌಶಲ್ಯಗಳನ್ನು ಹೆಚ್ಚಿಸಿ ಸನಾತನ ಧರ್ಮಕ್ಕೆ

ಏಳಿಗೆಯನ್ನು ತರಲಿಲ್ಲವೆ? ಈ ಸನಾತನ ಧರ್ಮದಲ್ಲಿ ಜಾತಿ, ಕರ್ಮ, ಸಂಸ್ಕಾರಗಳು ಗೌಣವಾಗಿದ್ದು ದೇಶ ಮತ್ತು ಆತ್ಮೀಯವೃದ್ಧಿಯನ್ನು ಮಾಡುವುದೇ ಶ್ರೇಷ್ಟ ಧರ್ಮವಾಗಿರುತ್ತದೆ. ಈ ಆತ್ಮ ಧರ್ಮವನ್ನು ಪರಿಪಾಲಿಸುವುದೇ ಹಿಂದೂದೇಶದ ಕರ್ತವ್ಯವು.

ಕಾರಣ ನಾಗರೀಕತನದ ಕಲಾ, ಸೇನಾ, ದ್ರವ್ಯಸಂಚಯದ ವೃಥಾ ಆಡಂಬರದಿಂದಲೂ, ಪರದೇಶದಿಂದ ಬಂದ ನಾಸ್ತಿಕಮತದ ಭರದಿಂದಲೂ, ಧರ್ಮವು ಲೋಪವಾಗುವಂತಿದೆ. ನಾವು ಪರದೇಶದವರಿಗೆ ಮೆಚ್ಚಿ ಧರ್ಮವನ್ನು ಬಿಟ್ಟು ಅವರ ಪದ್ಧತಿಗಳನ್ನನುಸರಿಸಿದ್ದೇವೆ. ಈಗ ಎಲ್ಲಾ ಕಡೆಗಳಲ್ಲಿಯೂ, ಪರರ ಉಡಿಗೆತೊಡಿಗೆಗಳನ್ನೂ, ವಿದ್ಯೆಯನ್ನೂ, ಕಟ್ಟಳೆಗಳನ್ನೂ, ನಡೆನುಡಿಗಳನ್ನೂ, ಅನುಸರಿಸಿ ಅವರಂತೆಯೇ ಆಗಲು ಪ್ರಯತ್ನಿಸುತ್ತಾರೆ. ಅಹಾ! ಇದೆಂಥಾ ಮಾತು, ಕಪ್ಪುನಾಯಿಯನ್ನು ತಿಕ್ಕಿ ಅಭ್ಯಂಗಸ್ನಾನ ಮಾಡಿಸಿದರೆ ಬಿಳೇನಾಯಿಯಾಗುವುದೇ? ಎಂದಿಗೂ ಆಗದು. ಹಾಗೆಯೇ ಪೂರ್ವಗೋಳದವರು ಪಶ್ಚಿಮಗೋಳದವರ ನಡೆ, ನುಡಿ, ಕಟ್ಟಳೆ, ಕಾನೂನುಗಳನ್ನನುಸರಿಸ ಬಂದರೆ ಅವರಂತೆಯೇ ಆದಾರೇ? ಹೀಗೆ ಆಗಲಾರದ ಕಾರ್ಯವನ್ನು ಯತ್ನಿಸಿ ನಮ್ಮಲ್ಲಿದ್ದ ಸ್ವಾಭಾವಿಕವಾದ ಸತ್ವವನ್ನು ಕಳೆದುಕೊಂಡ ಹಿಂದುಗಳಾಗಿ ಸಾಯು ವೆವು. ದಯಾಹೀನರೂ ಕ್ರೂರಿಗಳೂ ಆದ ಪರಜನಾಂಗದವರು ಬಂದು ಸದೆಬಡಿದರೂ ಸಹಿಸಿಕೊಂಡ ಹಿಂದೂದೇಶಕ್ಕೆ ಎಂತಹ ದುರವಸ್ಥೆಯು!

ಇನ್ನಾದರೂ ಆಗದ ಕೆಲಸವನ್ನು ಬಿಟ್ಟು ದೇಹಸಾರ್ಥಕವನ್ನು ಮಾಡಬೇಕು. ನಮ್ಮ ಆತ್ಮಸಂಪತ್ತಿಯನ್ನು ಹೆಚ್ಚಿಸಿ ಧರ್ಮಜಾಗ್ರತೆಯನ್ನೂ, ದೇಶಜಾಗ್ರತೆಯನ್ನೂ ಮಾಡಬೇಕು.

ಈ ಮಹಾಕಾರ್ಯದಲ್ಲಿ ದೇಶಾಭಿಮಾನಿಗಳೂ, ಮಹಂತರೂ, ಸಾಧುಗಳೂ ಪ್ರಯತ್ನಿಸುವುದರಿಂದ ನಾವು ಕೂಡಾ ಅವರನ್ನು ಸೇರಬೇಕು. ಋಷಿಕುಲಜ್ಞರೇ! ಆತ್ಮಬಂಧುಗಳೇ! ನಿಮ್ಮ ಧರ್ಮವನ್ನು

ನೀವೇ ಮರೆತು ಪರಾರ್ಥವನ್ನು ಬಿಡಬೇಡಿರಿ. ಧರ್ಮದಿಂದಲೇ ಎಲ್ಲಾ ಶಕ್ತಿಯ ರಚನೆಯೂ, ಮತೋನ್ನತಿಯೂ ಆಗುವುದು. ಆದಕಾರಣ ಚಿರಾಯುವಾದ ಸನಾತನ ಧರ್ಮವನ್ನು ಅವಲಂಬಿಸಿ ದೇಹ ಸಾರ್ಥಕ ವನ್ನು ಮಾಡಿಕೊಳ್ಳಿರಿ.

ಈಗಿನ ಆಧುನಿಕ ವಿದ್ಯೆಯಂತೆ ಮನಸ್ಸಿನ ಶಕ್ತಿಗಳನ್ನು ಮಾತ್ರ ಹೆಚ್ಚಿಸದೆ ಅವಕ್ಕೆ ಸಂಬಂಧಪಟ್ಟ ದೇಹಕ್ಕೂ, ಎಲ್ಲಾ ಶಕ್ತಿ ಗಳಿಗೂ ಮೂಲ ಕಾರಣವಾದ ಅಂತಃಕರಣವನ್ನು ಧೃಡೀಕರಿಸಿ, ಅವುಗಳನ್ನು ಸತ್ವಮಯವಾಗಿ ಮಾಡುವುದೇ ಸನಾತನ ಧರ್ಮವು. ಅಂದರೆ ಮನುಷ್ಯನಲ್ಲಿ ದೇಹದ ಜಡಧರ್ಮ, ಮನಸ್ಸಿನ ಪಶುಧರ್ಮ ಮತ್ತು ಅಂತಃಕರಣದ ದೇವಧರ್ಮ, ಇವೆಲ್ಲವು ಅಡಕವಾಗಿದ್ದು ಇವು ಗಳಲ್ಲಿ ಒಂದನ್ನೇ ಶಿಕ್ಷಿಸುವುದರಿಂದ ಮನಸ್ಸು ರಾಕ್ಷಸರೂಪವಾಗಿ ಸ್ವಾರ್ಥಪರಾಯಣರಾಗಿ ಮಾಡಿ ಮತ್ತೊಂದು ದುಸ್ವಭಾವದಿಂದ ಪರಿಣ ಮಿಸುವುದು. ಹೀಗೆ ಒಂದೇ ರೀತಿಯಾದ ಯೋಗ್ಯ ನಿಯಮದಿಂದ ಮಾತ್ರ ಮನುಷ್ಯನು ತನ್ನ ದೇಹ ಮತ್ತು ಆತ್ಮಸ್ವಾರ್ಥಕತೆಯ ಕೃತ್ಯವನ್ನು ನಡಿಸಲು ಶಕ್ತನಾಗುತ್ತಾನೆ. ನವೀನ ವಿದ್ಯೆಯ ಅನುಕಾರಿಗಳಾದ ಹಿಂದೂ ಸಾಹೇಬರು, ತಮ್ಮ ಅಶಕ್ತವಾದ, ಮತ್ತು ಕ್ಷೀಣವಾದ ದೇಹ ದಿಂದಲೂ, ದೇಶದ ಉನ್ನತಿಯ ಕೆಲಸವನ್ನು ಮಾಡಲು ತೊಡಗಿರುವರು. ಶುಷ್ಕ ಪಾಂಡಿತ್ಯದ ಮಾತುಗಳಲ್ಲದೆ ದೇಶದವರ ಗೋಳನ್ನು ಕೇಳಲಾರರು. ಮೂರ್ಖರ ಅಜ್ಞಾನವನ್ನು ಅವರು ತೆಗೆಯಲಿಲ್ಲ, ಬಡತನವನ್ನು ಹೋಗಾ ಡಿಸಲಿಲ್ಲ, ಏಕೆಂದರೆ ಅವರಲ್ಲಿ ಸಹೃದತೆಯೂ, ನಿಜವಾದ ಅಂತಃಕರಣ ದಿಂದ ಹುಟ್ಟಿದ ಪ್ರೇಮವು ಕೊಂಚ. ಪ್ರೇಮವು ಹುಟ್ಟಿದರೂ ಕಾರ್ಯ ವನ್ನು ಕೈಕೊಳ್ಳಲು ಧೈರ್ಯೋತ್ಸಾಹಗಳು ವಿರಳ. ಈ ವಿದ್ಯೆಯಿಂದ ದೂಷಿತರಾದ ಜನರು ಸ್ವಾರ್ಥಿಗಳೂ ಕ್ರೂರರೂ ಆಗಿ ಬೇರೆಯವರನ್ನು ಪೀಡಿಸುವ ಕರ್ಮಗಳಲ್ಲಿ ನಿರತರಾಗುವದರಲ್ಲಿ ಏನು ಆಶ್ಚರ್ಯ?

ಇದಕ್ಕಾಗಿಯೇ ಧರ್ಮವು, ದೇಹದ ನಿಯಮವನ್ನು ಕೈಕೊಂಡು,

ಬ್ರಹ್ಮಚರ್ಯಾದಿ ಅಭ್ಯಾಸದಿಂದ ಶೌರ್ಯತೆ, ದೃಢತೆ, ಮತ್ತು ದೇಹದ ಸಹಿಷ್ಣುತೆ ಇದನ್ನು ಕರ್ಮ ಮಾರ್ಗದ ಮುಂಭಾಗವಾಗಿ ಮಾಡಿಟ್ಟುಕೊಂಡಿದೆ ಮತ್ತು ಸುಖಾಭಿಲಾಷಿಯಾದ ಸ್ವೇಚ್ಛಾಚಾರಿಯಾದ ಮನಸ್ಸಿನ ಸ್ಥಿರತೆಗೆ ಯಮನಿಯಮದ ಅಭ್ಯಾಸಗಳನ್ನು ಹೇಳಿದೆ.

ಹೀಗೆ ನಮ್ಮಲ್ಲಿ ಹೆಚ್ಚುತ್ತಿರುವ ಜಡಭಾಗವನ್ನು ಹೋಗಲಾಡಿಸಿ ದೇಹದ ಸ್ಥಿರತೆ, ಶರೀರದ ಪಟುತ್ವ, ಮನಸ್ಸಿನ ಚಂಚಲತೆಯನ್ನು ಕಮ್ಮಿ ಮಾಡಿ ಪ್ರಶಾಂತತ್ವವನ್ನುಂಟುಮಾಡುವ ಕರ್ಮಮಾರ್ಗದಲ್ಲಿ, ಶೌಚ, ಸ್ನಾನ, ವೃತ, ನೇಮ ಮೊದಲಾದುವುಗಳನ್ನನುಸರಿಸುವುದೇ ನಿಜ ವಿದ್ಯೆಯೆನಿಸುವುದು.

ಈ ಕರ್ಮಮಾರ್ಗದಲ್ಲಿ ಅಹಿಂಸಾ, ಆಸ್ತೇಯ, ಬ್ರಹ್ಮಚರ್ಯ, ಸತ್ಯ, ಕ್ಷಮಾ, ಧೃತಿ, ಆರ್ಜವ, ಮಿತಾಹಾರ, ಶೌಚ, ಸ್ನಾನ, ವೃತ್ತ ತಪ, ಸಂತೋಷ ಮತ್ತು ಈಶ್ವರ ಪ್ರಣಿಧಾನ ಮುಖ್ಯವು.

ಈ ಎಲ್ಲಾ ಗುಣಗಳು ಮುಖ್ಯ ನೀಚ ಪಶುಧರ್ಮಗಳನ್ನು ನಿಷೇಧಿಸಿ ನೀತಿಯ ಬಲವನ್ನು ಬೋಧಿಸುವುದು. ಈ ನೀತಿಯ ಅಸ್ತಿವಾರದ ಮೇಲೆಯೇ ನಮ್ಮ ಆತ್ಮ ಉತ್ಕರ್ಷ್ಯತೆಯ ಭವ್ಯ ಭವನವನ್ನು ಕಟ್ಟಬೇಕು.

ಅಹಿಂಸಾ ಅಂದರೆ ಪರಪೀಡೆಯನ್ನು ಮಾಡದೆ ಎಲ್ಲವರ ಹಿತವನ್ನು ಬಯಸುವುದು. ವನಸ್ಪತಿಗಳ ಸೇವನದಿಂದ ತನ್ನ ಹಸಿವು ಶಾಂತವಾಗುತ್ತಿರಲು ಪ್ರಾಣಿಗಳನ್ನಂತೂ ಆಹಾರಕ್ಕೆ ಉಪಯೋಗಿಸಬಾರದು. ಪರರನ್ನು ತನ್ನ ಹಿಂಸಕರ್ತವ್ಯದಿಂದ ನೋಯಿಸುವುದಲ್ಲದೆ ತನ್ನ ಮಾತಿನಿಂದಲೂ, ಇತರರ ಮನಸ್ಸನ್ನು ನೋಯಿಸಲಾಗದು. ಯಾವ ಕಾಲದಲ್ಲಾದರೂ ನಮ್ಮ ಸ್ವಾರ್ಥವನ್ನು ಸಾಧಿಸುವಲ್ಲಿ, ಪರರಿಗೆ ಅಲಕ್ಷ್ಯತೆಯನ್ನು ಮಾಡಿ ಪೀಡಿಸಿದ್ದಲ್ಲಿ ಒಂದು ಪ್ರಕಾರದ ಹಿಂಸೆಯೇ ಆಗಿ ಪರಿಣಮಿಸಿ ಅಧೋಗತಿಗೆ ತರುವುದು. ಆದುದರಿಂದ ಯಾವತ್ತು

ಕಾರ್ಯದಲ್ಲಿ ಪರರ ಹಿತವನ್ನು ತನ್ನ ಹಿತದಂತೆಯೇ ನೋಡಿ ವರ್ತಿಸುವುದು ಧರ್ಮವು. ಎಲ್ಲಾ ಭೂತಗಳಲ್ಲಿಯೂ ಪ್ರೀತಿಯಿಟ್ಟು ನಡೆದರೆ ಕ್ರೂರ ಪ್ರಾಣಿಗಳೂ ವೈರತ್ವವನ್ನು ಬಿಡುವುವು ಎಂದು ಪಾತಂಜಲ ಶಾಸ್ತ್ರಜ್ಞರು ಹೇಳಿದ್ದಾರೆ.

ಸತ್ಯ:—ಕಪಟವನ್ನು ತ್ಯಜಿಸಿ ಯಥಾರ್ಥವನ್ನು ಪರರ ಮನಸ್ಸು ನೋಯದಂತೆ ಹೇಳುವುದೇ ಸತ್ಯ. ಇದರಿಂದ ಹಿಂದೂದೇಶದ ಧರ್ಮವೂ ರಾಜ್ಯವೂ ಚರಮಾವಸ್ಥೆಯನ್ನು ಹೊಂದಿದವು. ಸತ್ಯಪಾಲನದಿಂದ ಮಹಾತ್ಮ ಗಾಂಧಿಯಂಥಾ ಧೀರರು ಸಾಮರ್ಥ್ಯವನ್ನು ಹೊಂದಿದರು. ಕಾರ್ಯಾಲೋಚನೆಗಳಲ್ಲಿ ಸತ್ಯದಿಂದಲೇ ಪ್ರವರ್ತಿಸಿದರೆ ಚಾಂಚಲ್ಯವೂ, ಅಶಕ್ತತೆಯೂ, ಎಲ್ಲವೂ ತೊಲಗಿ ಮನಸ್ಸು ಪ್ರಸನ್ನವಾಗುವುದು. "ಸತ್ಯವಿದ್ದರೆ ಎತ್ತಲೂ ಭಯವಿಲ್ಲ" ಎಂಬಂತೆ ಯಾವ ಕಾರ್ಯ ಮಾಡುವುದಕ್ಕೂ ಸತ್ಯಾಚಾರಿಯು ಸಮರ್ಥನಾಗುವನು.

ಸಂಶೋಧಕರೂ, ತತ್ವಜ್ಞಾನಿಗಳೂ, ಭಕ್ತರೂ, ಸತ್ಯವನ್ನೇ ಆಚರಿಸಿದರು. ಸತ್ಯವೇ ನಮಗೆ ಧೈರ್ಯ ಕೊಟ್ಟು, ಸತ್ಕಾರ್ಯಗಳಲ್ಲಿ ಪ್ರವರ್ತಿಸಿ ನಮ್ಮನ್ನು ಜ್ಞಾನಿಗಳಾಗಿ ಮಾಡುವುದು; ಸತ್ಯದಿಂದಲೇ, ನಮ್ಮ ಮಾತಿಗೆ ಅಪೂರ್ವವಾದ ಶಕ್ತಿ ಬರುವುದು. ಆದುದರಿಂದಲೇ "ಸತ್ಯಂ ವದ, ಧರ್ಮಂ ಚರ," ಎಂದು ಜ್ಞಾನಿಗಳು ನುಡಿಯುವರು.

ಆಸ್ತೇಯ:—ಪರರ ವಸ್ತುಗಳನ್ನು ಅಪಹರಿಸದಿರುವುದು ಆಸ್ತೇಯ. ಕಳವು ಹೇಗೆ ಅವಮಾನಕರವೆಂದು ಬಿಟ್ಟುಬಿಡುವೆವೋ, ಅಂತೆಯೇ ಪರರ ವಸ್ತುಗಳನ್ನು ಪಡೆಯಬೇಕೆಂಬ ಇಚ್ಛೆ ಇರಬಾರದು. ಯಾಕೆಂದರೆ, ತನಗೆ ಧನಾದಿ ಉಪಭೋಗ ಪದಾರ್ಥಗಳು ಬೇಕೆಂಬ ಆಸೆಯಿಂದ ನಮ್ಮ ಭಾವನಾಶಕ್ತಿಯು ಕುಂಟಿತವಾಗಿ ಅದರ ತೇಜಸ್ಸೂ, ಬಲವೂ ಕಮ್ಮಿಯಾಗುವುದು. ಎಲ್ಲಾ ವಸ್ತುಗಳೂ ನಮಗೆ ಬಂಧನಕ್ಕೆ ಕಾರಣಗಳೆಂದು ಇಚ್ಛೆಗಳನ್ನು ತೊರೆದವನಿಗೆ ಎಲ್ಲವೂ ಹತ್ತರ ಬರುವವು. ಈ ಸಂದರ್ಭದಲ್ಲಿ

ಸ್ವಾಮಿ ರಾಮತೀರ್ಥರು 'ಆತ್ಮರೂಪದಿಂದ ಎಲ್ಲಾ ವಸ್ತುಗಳೂ ನಮ್ಮ ದಾಗಿರಲು ಸುಮ್ಮನೆ ಕಾಮನೆ ಮಾಡಬಾರದು' ಎಂತ ಹೇಳಿರುವರು. ಕಾಮನೆಯಿಂದ ಮನಸ್ಸು ಉದ್ವಿಗ್ನವಾಗುತ್ತದೆ'. ಆ ಕಾಮನೆಯನ್ನು ಬಿಟ್ಟು ಸ್ವರೂಪಸ್ಥಿತಿಯನ್ನು ಅನುಸಂಧಾನ ಮಾಡಲು ಎಲ್ಲವು ತನ್ನಷ್ಟಕ್ಕೆ ಒದಗುವವು.

ಬ್ರಹ್ಮಚರ್ಯ:—ಎಂದರೆ ಷಡ್ವೈರಿಗಳನ್ನು ಜೈಸಿ ಗುರುವಿನ ಕೂಡ ವಾಸಮಾಡುವದು. ಇಂದ್ರಿಯಕ್ಕೂ ದೇಹಕ್ಕೂ ನಿಕಟವಾದ ಸಮ್ಮಂಧ ವಿರುವುದು. ಇಂದ್ರಿಯ ಅಥವಾ ವೀರ್ಯಪಥನದಿಂದ ದೇಹದ ಬಲವು ಕಮ್ಮಿಯಾಗಿ ಮನಸ್ಸು ಚಾಂಚಲ್ಯವನ್ನು ಹೊಂದುವುದು. ಇಂದ್ರಿಯವು ರಕ್ಷಣ್ಯವಾದಂತೆಯೇ, ದೇಹವು ಸತೇಜವೂ, ದೃಢವೂ, ಆಗಿ ಬಲವೂ, ಬುದ್ಧಿಯೂ ಹೆಚ್ಚುವುದು. ಬ್ರಹ್ಮಚರ್ಯ್ಯದ ಸಾಧನೆಯಿಂದ ಮುಂಚಿನ ಋಷಿಗಳು ವೀರರೂ, ವಜ್ರದೇಹಿಗಳೂ ಆದರು. ಬ್ರಹ್ಮಚರ್ಯ್ಯವನ್ನು ಸಾಧಿಸುವವರು ಸ್ತ್ರೀಯರ ಏಕಾಂತದಲ್ಲಿ ಸೇರುವುದು, ವ್ಯವಹಾರ ಮಾಡುವುದು, ಮಾತಾಡುವುದು ಅಲ್ಲದೆ ಅವರ ವಿಚಾರ ಸಹ ಮಾಡಬಾರದು. ಹೀಗೆ ಬ್ರಹ್ಮಚರ್ಯವನ್ನು ಸಾಧಿಸಿದರೆ, ದೇಹ ದೃಢತೆಯೂ, ಮನೋನಿಗ್ರಹವೂ ಪ್ರಾಪ್ತಿಯಾಗುವುದು.

ಕ್ಷಮಾ:—ಎಂದರೆ ಇತರರು ಅಪಕಾರ, ಪೀಡೆ ಮುಂತಾದ್ದನ್ನು ಮಾಡಿದರೆ, ಮನಸ್ಸಿಗೆ ತಾರದೆ ಸಮತೆಯಿಂದಿರುವುದು. ಇದರಿಂದ ಕೋಪಾದಿ ವಿಕಾರಗಳು ನಿಂತು ಮನಸ್ಸು ಶಾಂತವಾಗುವದು.

ಧೃತಿ:—ಅಂದರೆ ಧೈರ್ಯ ಅಥವಾ ಉತ್ಕೃಷ್ಟವಾದ ಮಾರ್ಗವನ್ನು ಹಿಡಿದು ಅದರಲ್ಲಿ ಕಷ್ಟಗಳು ಬಂದಲ್ಲಿ ಕಳೆಗುಂದದೆ ಧೈರ್ಯವನ್ನು ತಾಳುವುದು. ಮಂದಮತಿಯುಳ್ಳವ ನಮ್ಮ ಜನರಿಗೆ ಧೈರ್ಯದ ಲಕ್ಷಣವೇನೆಂಬುದು ತಿಳಿಯದೆ ಇರುವದು! ಪ್ರತಿ ಕಷ್ಟಕ್ಕೂ ಮಿಡಿಕಿ ಹೆದರಿಕೆಯಿಂದಲೇ ತಮ್ಮ ಉದರಪೋಷಣ ಮಾಡುವರು. ಹೆಸರಿಗೆ ಮಾತ್ರ ಮನುಷ್ಯರು ತಾವು ಹುಟ್ಟಿದ ದೇಶವನ್ನೂ ತಮ್ಮ ಧರ್ಮವನ್ನೂ ನೋಡಿ ತಮ್ಮ ಹಿರಿಯರಂತೆ ಆತ್ಮಾಭಿವೃದ್ಧಿಯನ್ನು ಮಾಡುವುದೇ

ಧೈರ್ಯವು. ಇದರಲ್ಲಿ ಕಷ್ಟಗಳು ಬಂದರೂ ತನ್ನ ಪರೀಕ್ಷಾರ್ಥ ಬಂದಿರುವುವೆಂದು ತಿಳಿದು ಬಿಡದೆ ಸಾಧಿಸಬೇಕು.

ಆರ್ಜವ:—ಅಂದರೆ ಮನಸ್ಸಿನಲ್ಲಿ ಒಂದು ಹೊರಗೆ ಒಂದು ರೀತಿಯಾಗಿ ನಡೆಯದೇ ನಿಷ್ಕಪಟಿಯಾಗಿರುವುದು. ಇದು ಸತ್ಯದೊಂದು ಭಾಗವು. ಹೀಗಿದ್ದರೆ ಜನರು ತಮ್ಮನ್ನು ನಂಬುವರು. ಶೌಚ, ಸ್ನಾನ, ಮಿತಾಹಾರ, ವೃತ, ತಪ, ಸ್ವಾಧ್ಯಾಯ, ಸಂತೋಷ, ಈಶ್ವರಪ್ರಣೀಧಾನ ಇವೆಲ್ಲವೂ ನಿಯಮದ ಭಾಗಗಳಾಗಿ ಮನುಷ್ಯನನ್ನು ಕಾಮ್ಯಕರ್ಮಗಳಿಂದ ತೊಲಗಿಸಿ ನಿಷ್ಕಾಮಕರ್ಮದಿಂದ ಚಿತ್ತಶುದ್ಧಿಯನ್ನುಂಟುಮಾಡುತ್ತವೆ. ಶೌಚಸ್ನಾನ—ಎಂದರೆ ದೇಹಾದಿ ಇಂದ್ರಿಯಗಳ ಶುದ್ಧತೆ, ಸ್ನಾನದಿಂದ ದೇಹವು ಶುದ್ಧಿಯಾಗಿ ಎಲ್ಲಾ ಕಾರ್ಯಕ್ಕೂ ಅನುಕೂಲವಾಗುವದು.

ಮಿತಾಹಾರ:—ಎಂದರೆ ದೇಹಕ್ಕೆ ಬೇಕಾದಷ್ಟೇ ಯೋಗ್ಯಾಹಾರವನ್ನು ಸ್ವೀಕರಿಸುವುದು. ಆಹಾರವು ಮನಸ್ಸಿನ ಚಾಂಚಲ್ಯವನ್ನೂ, ರೋಗಾದಿಗಳನ್ನೂ ಹೆಚ್ಚಿಸುವುದರಿಂದ ಸಾಧು ಜನರು ತೀಕ್ಷ್ಣವಾದ ಹುಳಿ, ಉಪ್ಪು, ಖಾರ ಮೊದಲಾದುವನ್ನು ತ್ಯಜಿಸಿ ತನಗಗತ್ಯವಾದಷ್ಟು ಎಂದರೆ $\frac{1}{3}$ನೇ ಪಾಲಷ್ಟು ಅನ್ನವನ್ನೂ, $\frac{1}{3}$ನೇ ಅಂಶ ನೀರನ್ನೂ, ಸೇವಿಸಿಕೊಂಡು ಆಹಾರಕೋಶದ $\frac{1}{3}$ನೇ ಭಾಗಸ್ಥಳವನ್ನು ಪ್ರಾಣಸಂಚಾರಕ್ಕೆ ಬಿಡುವರು. ರಾಮತೀರ್ಥಸ್ವಾಮಿಯುವರು ರೋಗಾದಿಗಳು ಅಜಾಗ್ರತೆಯಿಂದ ಹುಟ್ಟುವವೆಂದು ಹೇಳುವರು. ಪುರಾತನ ವ ನವೀನ ಶರೀರ ಶಾಸ್ತ್ರಕಾರರು ಇದನ್ನು ಒಪ್ಪಿಕೊಳ್ಳುತ್ತಾರೆ. ಇದರಂತೆಯೇ ನಾವು ವರ್ತಿಸಿದರೆ ವೈದ್ಯರ ಆಶ್ರಯ ಹೊಂದಬೇಕಾದ ಅಗತ್ಯವಿರುವುದಿಲ್ಲ. ಅಭ್ಯಾಸದಿಂದ ಇದನ್ನು ಸಾಧಿಸಬಹುದು.

ವೃತ:—ವೆಂದರೆ ಸಂಧ್ಯಾವಂದನೆ, ನಿತ್ಯಕರ್ಮ, ಅನುಷ್ಠಾನ, ಆಹ್ನಿಕ ಮತ್ತು ದೇವತಾರ್ಚನೆ ಇದರಿಂದ ನಿಷ್ಕಾಮನಾ ಕರ್ಮದಿಂದ ಈಶ್ವರನ ಅನುಗ್ರಹವನ್ನು ಪಡೆಯುವುದೇ ಮುಖ್ಯ ಧ್ಯೇಯವು. ಸಂಧ್ಯಾವಂದನದಲ್ಲಿ, ಆಸನ, ಧ್ಯಾನ, ಅನುಷ್ಠಾನ ಇವೆಲ್ಲವೂ ಒಡಗೂಡಿದ್ದು

ಮುಖ್ಯವಾಗಿ ವಿಶ್ವಮಾತೆಯು ಸ್ಮರಣೆಯೇ ಅದರ ಮುಖ್ಯ ಉದ್ದಿಶ್ಯವು. ಇದರಿಂದ ಚಿತ್ತಶುದ್ಧಿಯಾಗುವುದು. ಗಾಯತ್ರಿಯು ವಿಶ್ವಕ್ಕೆ ಮೂಲವಾದ ಶಕ್ತಿಯು. ಅವಳೇ ಪ್ರಣವ ಸ್ವರೂಪಿಣಿಯಾಗಿದ್ದು ನಮಗೆ ಮೋಕ್ಷದ ಮಾರ್ಗವನ್ನು ತೋರಿಸುವಳು. ವಿಶ್ವದಲ್ಲಿ ಸೂರ್ಯರೂಪದಿಂದಲೂ ಒಳಗೆ ನಮ್ಮ ಬುದ್ಧಿಶಕ್ತಿಯ ರೂಪದಲ್ಲಿಯೂ, ಚೇತನವನ್ನು ಕೊಡುತ್ತಿರುವಳು. ಹೀಗೆ ಎಲ್ಲಾ ವೇದಕ್ಕೂ, ಶಕ್ತಿಗೂ ಮೂಲಕಾರಣವಾದ ಈ ಗಾಯತ್ರಿಯ ಉಪಾಸನೆಯು ನಮಗೆ ಪ್ರಾಧಾನ ಕರ್ತವ್ಯವಾಗಿರುವದು.

ಸ್ವಾಧ್ಯಾಯ:—ವೆಂದರೆ ಧರ್ಮಗ್ರಂಥಗಳನ್ನು ಪ್ರತಿದಿನ ವ್ಯಾಸಂಗ ಮಾಡುವದು. ಇದರಿಂದ ಈಶ್ವರನ ಲೀಲೆಯು ಮತ್ತು ಅವತಾರಗಳ ಚರಿತ್ರೆಗಳು ಸಾಧುಗಳ ಚರಿತ್ರೆ ಮತ್ತು ಅವರ ಅದ್ಭುತ ಕಾರ್ಯಗಳು ಇದಲ್ಲದೆ ಮಾನವಧರ್ಮ ಮಾರ್ಗ, ಉಪಾಸನೆ, ಯೋಗ, ಜ್ಞಾನ ಇವುಗಳ ವಿಸ್ತಾರವರ್ಣನೆ. ಇವುಗಳನ್ನು ಧ್ಯಾನಯುಕ್ತವಾಗಿ ಪಠಣೆ ಮಾಡುವದರಿಂದ ಉತ್ಸಾಹ, ಭಕ್ತಿ, ಪ್ರೇಮ ಮತ್ತು ವೈರಾಗ್ಯವು ಹೆಚ್ಚಿ ಅಂತಃಕರಣವು ಶುದ್ಧಿಯಾಗುವದು. ನಿಯಮದಿಂದ ಇದೆಲ್ಲಾ ಸಾಧ್ಯವಾಗುವದು. ಇದರಿಂದ ಈಶ್ವರಾನುಗ್ರಹವು ನಿಶ್ಚಯವಾಗಿ ಲಭಿಸುವದು.

## ಈಶ್ವರ ಭಕ್ತಿ.

ಈಶ್ವರನಲ್ಲಿ ಇಡುವ ಪ್ರೀತಿಯೇ ಭಕ್ತಿಯು. ಈಶ್ವರ ತತ್ವವು ಮನುಷ್ಯನ ತಲೆಮೆದುಳಿಂದ ಮತ್ತು ಇಂದ್ರಿಯಗಳಿಂದ, ಪ್ರೇಮ ಅಥವಾ ಆನಂದ ರೂಪವಾಗಿ ತೋರುವುದು. ಈ ಪ್ರೇಮದ ನೆನಪಿರುವುದರಿಂದ ಆನಂದ ಸ್ವರೂಪವು ತೋರಿ ಎಂಥಾ ಕಷ್ಟದಲ್ಲಿ ಇರುವ ಮನುಷ್ಯನು ಜೀವಿಸುತ್ತಿದ್ದಾನೆ. ಈ ಪ್ರೇಮವು ಸರಿಯಾಗಿ ಬೆಳೆಸಿದರೆ ವಿಕಾರ ರಹಿತವಾದ ಅಖಂಡ ಚಿತ್‌ರೂಪವನ್ನು ಹೊಂದುವನು. ಹೀಗೆ ಅಖಂಡವಾದ ಭೂಮಾಸ್ವರೂಪದಲ್ಲಿ ಇಡುವ ವಿಶ್ವಾಸವೇ ಭಕ್ತಿಯು. ಸರ್ವಕ್ಕೂ ಆಧಾರವಾದ, ಸರ್ವವ್ಯಾಪಿಯಾದ ಸ್ವರೂಪಕ್ಕೆ ನ್ಯೂನತೆ ಇಲ್ಲ. ಆದುದರಿಂದ ಭಕ್ತರೂ, ಜ್ಞಾನಿಗಳೂ, ತಮ್ಮ ದೇಹದ ವಿಷಯ ವೈರಾಗ್ಯವನ್ನು ತಾಳಿ ಭೂತಮಾತ್ರಗಳಲ್ಲಿ ಈಶ್ವರ ಭಾವನನ್ನು ಇಡುವರು;

ಮತ್ತು ಎಲ್ಲಾ ಪ್ರಯತ್ನಗಳನ್ನು ದೇಹಸಾರ್ಥಕತೆಗೆ ಉಪಯೋಗಿಸುವರು. ತುಕಾರಾಮನು ತನ್ನ ಸಾಧನ ಸಮಯದಲ್ಲಿ ಬಡತನದಿಂದ ಅನೇಕ ಕಷ್ಟಗಳನ್ನು ತಾಳಬೇಕಾಯಿತು. ಆದರೂ ದೇಹಪೋಷಣದ ಕಡೆಗೆ ಮನಸ್ಸನ್ನಿಡದೆ, ಒಂದು ಏಕಾಂತಸ್ಥಳಕ್ಕೆ ಹೋಗಿ ಈಶ್ವರ ನಾಮ ಸ್ಮರಣೆಯಲ್ಲೇ ಮಗ್ನನಾಗಿದ್ದನು. ದೇಹಕ್ಕೆ ಹಸಿವೆಯಾಯಿತೆಂದರೆ, ಯಾರಾದರೂ ಏನನ್ನೋ ತಂದುಕೊಡುವರು. ಹೀಗೆಯೇ ವಿವೇಕಾನಂದರು ರೈಲುಗಾಡಿಯಲ್ಲಿ ಪ್ರಯಾಣಮಾಡುತ್ತಿರುವಾಗ ಅನೇಕ ದಿವಸ ಆಹಾರವಿಲ್ಲದೆ ತೊಳಲಬೇಕಾಯಿತು. ಹೀಗೆ ಉಪವಾಸ ಬಿದ್ದ ಸಾಧುವನ್ನು ಒಬ್ಬ ವ್ಯಾಪಾರಿಯು ಹೀಯಾಳಿಸಿ ದೇಹಕ್ಕೋಸ್ಕರ ಪ್ರತಿಯೊಬ್ಬನೂ ಕಷ್ಟಪಡಬೇಕು ಎಂದು ತುಚ್ಛೀಕರಿಸಿದನು. ಈ ನಿಂದೆಯ ಮಾತು ಆಡಿದ ಕೆಲವು ಸಮಯದಲ್ಲಿ, ಇನ್ನೊಂದು ಸ್ಟೇಷನಿನಲ್ಲಿ ಎಲ್ಲಾ ಆಹಾರ ಅನುಕೂಲತೆಗಳು ತೆಗೆದುಕೊಂಡು ಒಬ್ಬ ಬನಯನು ಬಂದನು. ಅವನು "ಒಬ್ಬ ಸನ್ಯಾಸಿಯು ಇತ್ತಕಡೆ ಬಂದಿದ್ದಾನೋ" ಎಂದು ಕೇಳಿ ಹುಡುಕುತ್ತಿದ್ದನು. ಈ ರೀತಿಯಲ್ಲಿ ಹುಡುಕಲು ಕಾರಣವನ್ನು ಕೇಳಲು, ತನಗೆ ಈಶ್ವರನು ಸ್ವಪ್ನದಲ್ಲಿ ಬಂದು "ನನ್ನ ಭಕ್ತನು ಕಷ್ಟದಲ್ಲಿದ್ದಾನೆ; ಅವನ ರಕ್ಷಣೆ ನೀನು ಮಾಡಬೇಕು" ಎಂದು ಹೇಳಿದನು. ಇದು ಬರೇ ಸ್ವಪ್ನವೆಂದು ಅಸಡ್ಡೆಮಾಡಲು, ಒಂದು ಘರ್ಜನೆಯಾಗಿ ತನ್ನನ್ನು ತಳ್ಳಿದಂತಾಯಿತು. ಆದುದರಿಂದ ತಾನು ಆಹಾರ ಪದಾರ್ಥಗಳನ್ನು ತೆಕ್ಕೊಂಡು ಬಂದಿದ್ದೇನೆ. ಇದನ್ನು ಈಶ್ವರ ರೂಪವನ್ನು ತಾಳಿದ ಈ ಭವ್ಯ ಸನ್ಯಾಸಿಯು ಸೇವಿಸಬೇಕು ಎಂದು ಹೇಳಿ ಅವುಗಳನ್ನು ಅರ್ಪಿಸಿದನು.

(ವಿಶ್ವಾಸ)

ಈಶ್ವರ ತತ್ವದಲ್ಲಿ ಎಲ್ಲವೂ ಏಕರೂಪವಾಗಿದ್ದು, ಅದರಲ್ಲಿ ಭೇದಕ್ಕೆ ಏನೂ ಕಾರಣವಿಲ್ಲ. ಯಾವ ರೀತಿಯಿಂದ ಅದು ಅಬಾಧಿತ ಮತ್ತು ಸರ್ವ ಪರಿಪೂರ್ಣವೆಂದು ವಿಶ್ವಾಸವಿಡುತ್ತೇವೋ ಆ ರೀತಿಯಲ್ಲಿ ಅದು ನಮ್ಮನ್ನು ಪರಿಪಾಲಿಸುವುದು. ಸೋಹಿರೋಬನಾಥನಿಗೆ ಕವಿತಾಶಕ್ತಿಯೂ, ಗಿರೀಶ್ಚಂದ್ರಘೋಸನಿಗೆ ನಾಟಕಕಲಾಶಕ್ತಿಯೂ, ವಿವೇಕಾನಂದನಿಗೆ

ವಾಕ್ಪಟುತ್ವವನ್ನೂ ಕೊಟ್ಟ ಸರ್ವಶಕ್ತಿಯಿಂದ ಕೂಡಿದ ಈಶ್ವರತತ್ವವು ಎಲ್ಲಾ ಕಡೆಯಲ್ಲಿ ತುಂಬಿ ತುಳುಕಿರಲು ನಮ್ಮ ನಿಕೃಷ್ಟವಾದ ದೇಹವನ್ನು ಉತ್ಕೃಷ್ಟವೆಂದೆಣಿಸುವುದು ಶುದ್ಧ ಹುಚ್ಚುತನ. ಸಾಕ್ಷಾತ್ ಪರಮಾತ್ಮನೇ ನಮ್ಮ ದೇಹದ ಸಲುವಾಗಿಯೂ, ದೇಶದ ಸಲುವಾಗಿಯೂ, ಅವತಾರವನ್ನು ತಾಳಿ, ಜಡ ಭಾವವನ್ನು ತಾಳಿದ ಜನರಿಗೆ, ನಿತ್ಯಶುದ್ಧ, ಅಖಂಡ ಸ್ವರೂಪದಲ್ಲಿ ಬಲವನ್ನು ಪಡೆಯಬೇಕು, ಎಂದು ಬೋಧಿಸುತ್ತಾನೆ. ಈ ಕಾರಣದಿಂದ ನಿಜಭಕ್ತನು ತನ್ನ ದೇಹದ ಕಡೆಗೆ ಲಕ್ಷ್ಯವಿಡದೆ ವೈರಾಗ್ಯವನ್ನು ತಾಳಿ ಈಶ್ವರಪ್ರೇಮವನ್ನು ಹೆಚ್ಚಿಸಲು ಪ್ರಯತ್ನಿಸಬೇಕು.

## (ವೈರಾಗ್ಯ)

ವೈರಾಗ್ಯವೆಂದರೆ ಸತಿಸುತಾದಿ ವಿಷಯಗಳಲ್ಲಿ ಮೋಹವನ್ನು ಬಿಟ್ಟು ನಿಜತತ್ವದ ವಿಚಾರ ಮಾಡುವುದು. ಈಗಲಾದರೋ ಮನುಷ್ಯನ ಮನಸ್ಸು ಸಂಸಾರಿಕ ವಿಷಯಗಳಲ್ಲಿ ಸಿಲುಕಿ ಜಡರೂಪವನ್ನು ತಾಳಿರುವುದು. ಇದನ್ನು ಹೋಗಲಾಡಿಸಲು, ವಿಷಯಗಳನ್ನು ತ್ಯಜಿಸಿ, ಈಶ್ವರನ ಸಾನ್ನಿಧ್ಯವೇ ಮೂಲತತ್ವವೆಂದೆಣಿಸಿ, ಶುದ್ಧತೆಯನ್ನೂ ಸತ್ಯವನ್ನೂ ಸ್ವೀಕರಿಸಿ, ಮನಸ್ಸನ್ನು ಹುಚ್ಚುಮಾಡಿ ಅಧೋಗತಿಗಿಳಿಸುವ ಆ ವಿಷಯಾದಿಗಳನ್ನು ತೊರೆಯಬೇಕು. ಈ ರೀತಿಯನ್ನೇ ಅನುಸರಿಸಿ ರಾಮಕೃಷ್ಣ ಪರಮಹಂಸರು ಲೌಕಿಕವನ್ನು ಬಿಟ್ಟು ಹನ್ನೆರಡು ವರ್ಷ ಏಕಾಂತದಲ್ಲಿ ಸ್ತ್ರೀ ಧನಮೋಹಗಳನ್ನು ತೊರೆಯಲು ಸಾಧನೆಯನ್ನು ಮಾಡಿದರು. ಮತ್ತು ಅವರ ಅನುಭವವು ಹೀಗಿರುವುದು:—[ಸ್ಮರಣೆ] ಹೇಗೆ ಒಂದು ಗಿಡವು ಸಣ್ಣ ಬೀಜ ವೃದ್ಧಿಯಾಗುವುದೋ ಹಾಗೆಯೇ ಪರಮಾರ್ಥವು ಅಭ್ಯಾಸದ ಬಲದಿಂದ ಕ್ರಮದಿಂದ ಬೆಳೆಯುವುದು. ಆದರೆ ಪ್ರಥಮಕ್ಕೆ ಆ ತತ್ವವು ವೃದ್ಧಿಯಾಗುವತನಕ ಯೋಗ್ಯನಿಷ್ಠೆ ಮತ್ತು ಏಕಾಂತವನ್ನು ಅನುಸರಿಸಿ ಪ್ರತಿ ದಿವಸದಲ್ಲಿಯೂ ಕ್ಲಿಪ್ತಕಾಲಕ್ಕೆ ಈಶ್ವರ ಸ್ಮರಣೆಯನ್ನು ನಡಿಸಬೇಕು. ಈ ಈಶ್ವರ ಸ್ಮರಣೆಯೇ ನಿಜತತ್ವದ ಭಾವವನ್ನು ನಮ್ಮಲ್ಲಿ ಅಂಕುರಿಸುವಂತೆ ಮಾಡಿ ಅಂತರ್‍ಸ್ವರೂಪವನ್ನು ತಿಳಿಸುವುದು. ಈ ಸ್ವರೂಪವು ಉದಯಿಸಬೇಕಾದರೆ, ದೇವರನ್ನು ಹತ್ತಿರವಾಗಿ ತಿಳಿದು, ತಂದೆಯಂತಾಗಲೀ, ಸ್ನೇಹಿತನಂತಾಗಲೀ, ಅಥವಾ

ತಾಯಿಯಂತಾಗಲೀ ಎಣಿಸಿ, ಶುದ್ಧಭಾವದಿಂದ ಅವನ ಕೀರ್ತನೆ, ವಂದನೆ, ಪಾದಸೇವನೆ, ಅರ್ಚನೆ, ಪೂಜೆ, ಭಜನೆ, ಮತ್ತು ಸ್ಮರಣೆ ನಡಿಸಬೇಕು. ಈ ಸ್ಮರಣೆಯಲ್ಲಿ ಮುಖ್ಯವಾದುವುಗಳು ಭಾವ ಮತ್ತು ನಿಷ್ಠೆ. ಹೇಗೆಂದರೆ, ಎಲ್ಲಾ ದೇವತಾರೂಪವು ಭಾವನಾ ರೂಪವಾಗಿದ್ದು ನಮ್ಮ ಭಕ್ತಿಯಿಂದ, ದೇಹದ ಜಡಭಾವವು (Individual consciousness) ಅಳಿಯಿತೆಂದರೆ ದೇವಭಾವವು (God consciousness) ಹುಟ್ಟುವದು. ಹೀಗೆ ದಿವಸದಲ್ಲಿ ಆರುಗಳಿಗೆಯಾದರೂ ನಿಷ್ಠೆಯಿಂದ ಸಾಧನೆ ಮಾಡಿದ್ದಲ್ಲಿ ಈಶ್ವರನ ರೂಪವು ಸ್ಮರಣೆಯಾಗುವುದು. ದೇಹವೂ ಮನಸ್ಸೂ ಶುದ್ಧವಾಗಿ ಅಂತರ್ಜ್ಯೋತಿಯು ತೋರಿ ಆನಂದಾವಿರ್ಭಾವವಾಗುವುದು. ಹೀಗೆ ದೇವರ ಸಾಕ್ಷಾತ್ಕಾರದಿಂದ ಅಪೂರ್ವ ಬಲವನ್ನು ಹೊಂದಿ ದೇವರ ಆದೇಶದಿಂದ ಎಲ್ಲಾ ಕಷ್ಟಗಳೂ ತೊಲಗಿ ಯೋಗ್ಯಮಾರ್ಗವು ತೋರುವುದು. ಎಲ್ಲಾ ಅದ್ಭುತ ಕಾರ್ಯಗಳು ಈಶ್ವರನ ಪ್ರೇರಣೆಯಿಂದಲೇ ಆಗುವವು. ನಾನು ಮಾಡುತ್ತೇನೆ ಎಂಬ ಅಹಂಕಾರವನ್ನು ತಾಳಿದರೆ ಆ ಕಾರ್ಯವು ಹಾಳಾಗುವದು ಕಾರಣ ಈಶ್ವರನ ಪ್ರೇರಣೆಯಿಂದ ನಡೆದ ಕಾರ್ಯವು ಅವನ ಅಸಾಧಾರಣ ಬಲದಿಂದ ಕೂಡಿರುವವು. ಆದುದರಿಂದಲೇ ಎಲ್ಲಾ ಕಾರ್ಯಗಳನ್ನೂ ಸ್ವಇಚ್ಛೆಯನ್ನು ಬಿಟ್ಟು ದೇವರಿಗೆ ಅರ್ಪಿತವಾಗಿ ಮಾಡಬೇಕು. ದೇವರಿಗೆ ಒಂದು ಕಾರ್ಯದ ಭಾರವು ಬಿಟ್ಟಿತೆಂದರೇ ಅವನೇ ಮಾರ್ಗದರ್ಶಕನಾಗಿ ಮುಂದೆ ನಮ್ಮನ್ನು ನಡೆಸುವನು. ಇದೇ ಕರ್ಮಮಾರ್ಗದ ಮುಖ್ಯ ತತ್ವವು. ಇದಕ್ಕೆ ಶಿವಾಜಿ ಮಹಾರಾಜನೇ ನಿದರ್ಶನವು. ಯಾಕಂದರೆ ಎಲ್ಲಾ ಜ್ಞಾನಸ್ಫುರಣೆಯೂ, ಬಲವೂ ದೇವರಿಂದಲೇ ಹುಟ್ಟುವುದು. ಆದದರಿಂದ ಎಲ್ಲರೂ ಈಶ್ವರ ಸ್ಮರಣೆಯನ್ನು ಮಾಡಿ, ತಮ್ಮನ್ನುದ್ಧರಿಸಿ, ದೇಶದಲ್ಲಿ ಆರ್ಯಧರ್ಮದ ಧ್ವಜವನ್ನು ನೆಟ್ಟು ದೇಶವನ್ನು ಉದ್ಧರಿಸತಕ್ಕದ್ದು.

ನಮೋ ಯೋಗೇಶ್ವರಾಯ ನಮಃ

# ಅಷ್ಟಾಂಗ ಯೋಗ.

ಮನುಷ್ಯಮಾತ್ರನು ಈ ಉತ್ತಮದೇಹವನ್ನು ಪಡೆದಿರಲು ಆತ್ಮ ಉತ್ಕರ್ಷತೆಯ ಮಾರ್ಗದಲ್ಲಿ ನಡೆಯಬೇಕು. ಉತ್ಕೃಷ್ಟವಾದ ದೇಹ ವಲ್ಲದೆ, ವಿಚಾರಮಾಡುವ ಬುದ್ಧಿಸ್ವಾಂತಂತ್ರ್ಯವು ಸಿಕ್ಕಿರಲು ಮನು ಷ್ಯನು ತನ್ನ ದೇಹಸಾರ್ಥಕತೆಯನ್ನು ಮಾಡದೆ ಇದ್ದರೆ ಅವನು ಇತರ ಪ್ರಾಣಿಗಳಿಂದ ಏತಕ್ಕೆ ಮೇಲಾಗಿರುವನು?

ಆತ್ಮ ಸಾರ್ಥಕತೆಯನ್ನು ಮಾಡದೆ ಇರುವದರಿಂದ ಈ ಪ್ರಪಂಚ ದಲ್ಲಿ ಮೋಹಕ್ಕೊಳಗಾಗಿ ಮೈಮರೆತು ಮುಂದೆ ರೋಗರುಜಿನಗಳಿಗೊಳ ಗಾಗುವನು. ಲೋಕದ ವಿಷಯ ವಿಚಾರಮಾಡಿದರೆ ಸುಳ್ಳು ಮತ್ತು ಲೋಭತನವು ಹೆಚ್ಚಿರುವುದರಿಂದ ದುಃಖಿಯಾಗುವನು. ಲೋಕ ಅಥವಾ ಪ್ರಪಂಚವೆಂಬುದು ಆಶಾಜನಿತವಾಗಿರುವುದು. ಈ ಆಶೆಯು ಧಾರೇಷಣ, ವಿತ್ತೇಷಣ, ಪುತ್ರೇಷಣ, ಎಂಬ ಅನೇಕ ಆಶೆಗಳಿಗೀಡಾಗಿ ಸ್ತ್ರೀ ವ್ಯಾಮೋಹದಲ್ಲಿ ಶಿಲುಕಿ ಅವಳ ಲಾಲನೆಪಾಲನೆಗಳಿಗೋಸುಗ ದ್ರವ್ಯಾ ರ್ಜನೆ ಮತ್ತು ಸೇವೆ ಎಂಬ ಬಂಧನಕ್ಕೆ ತಂದೊಡ್ಡುವುದು. ಹೀಗೆ ದೇಹಾದಿ ಮಮತೆಯಲ್ಲಿ ಬಿದ್ದು ತಾನು ದೊಡ್ಡವನು, ಪರರು ನೀಚ ರೆಂದು ಕೊಬ್ಬಿ, ಕರ್ಮಪರಂಪರೆಯಲ್ಲಿ ಬಿದ್ದು ಚ್ಯುತನಾಗಿ ಮೃತ್ಯು ವಿನ ಪಾಲಾಗುವನು. ಆದುದರಿಂದ ಬುದ್ಧಿವಂತನಾದ ಮನುಷ್ಯನು ತನ್ನ ಮನಸ್ಸಿನ ಮತ್ತು ದೇಹದ ಶುದ್ಧತೆಯನ್ನು ಸ್ಥಿರಪಡಿಸಲು ಪ್ರಯ ತ್ನಿಸಬೇಕು. ಎಲ್ಲಾ ಭೌತಿಕ ವಿದ್ಯೆಯೂ ಪ್ರಯತ್ನದಿಂದಲೇ ಸಾಧ್ಯ ವಾಗುವುದು. ಹಾಗೆಯೇ ಅಭ್ಯಾಸದಿಂದಲೇ ಆತ್ಮವಿದ್ಯೆಯು ಸಾಧ್ಯವಾಗು ವುದು. ॥ ಆತ್ಮನೇ ವಾತ್ಮನೋ ಬಂಧು ರಾತ್ಮೈವ ರಿಪುರಾತ್ಮನಾ ।

ಆತ್ಮಪ್ರಾಪ್ತಿಯು ದೊರಕಿತೆಂದರೆ ಎಲ್ಲಾ ಜ್ಞಾನವನ್ನೂ, ಸೌಭಾಗ್ಯವನ್ನೂ ಪಡೆದು ಆನಂದಶಿಖರವನ್ನು ಹೊಂದುವನು. ಅರಸನು ಹುಚ್ಚನಾಗಿರಲು ತನ್ನ ಸಾಮ್ರಾಜ್ಯವನ್ನು ಮರೆತು ಹಂಬಲು ಪಟ್ಟ ಹಾಗೆ, ನಾವು ಸ್ವರೂಪಸ್ಥಿತಿಯನ್ನು ಕಳೆದು ದೇಹದ ಕಷ್ಟಗಳಿಗೆ ಪಾಲಾಗಿದ್ದೇವೆ. ಈ ದೇಹಬಂಧನವು ಘೋರವಾಗಿದ್ದು, ಅದು ಆಶಾರೂಪದಿಂದ ಜನ್ಮಾನುಜನ್ಮಗಳಿಗೆ ಒಡ್ಡಲ್ಪಡುವುದು.

ಈ ಬಂಧನವನ್ನು ತಪ್ಪಿಸಲು ಯೋಗಮಾರ್ಗವೇ ಸುಲಭೋಪಾಯವು. ನರನು ಸ್ವಪ್ರಯತ್ನಮಾಡಿದ್ದಲ್ಲದೆ, ಜಡಧೇಹಾದಿ ಬಂಧನೆಯಿಂದ ಮುಕ್ತನಾಗಿ ಚೈತನ್ಯ ರೂಪವನ್ನು ಪಡೆಯುವುದು ಅಶಕ್ಯವು.

ಆದುದರಿಂದ ಪ್ರತಿಯೊಬ್ಬ ಜಾಣನು ಸಾಧನಾಮಾರ್ಗವನ್ನು ಹಿಡಿದು ಯೋಗಮಾರ್ಗದಲ್ಲಿ ಆರೂಢನಾಗಬೇಕು. ಈ ಯೋಗದ ಉದ್ದಿಶ್ಯವು ನಮ್ಮ ಜಡದೇಹದಲ್ಲಿ ಬಂಧನ ಹೊಂದಿದ ವೃತ್ತಿಯನ್ನು ಚೈತನ್ಯರೂಪವಾಗಿ ಮಾಡುವುದಾಗಿದೆ. ಮನುಜನು ದೇಹದ ಭೋಗಗಳಿಗೋಸುಗ ಮರುಳಾಗಿ ಇಂದ್ರಿಯಗಳಿಗೂ ನಾಡಿಗಳಿಗೂ ಆಧೀನನಾಗಿ ಶಬ್ದ, ಸ್ಪರ್ಶ, ರೂಪ, ರಸ, ಗಂಧಾದಿ ವಿಷಯದಲ್ಲಿ ಪ್ರವೃತ್ತಿಯಾಗುವನು. ಈ ಪ್ರವೃತ್ತಿಯಿಂದ ಇಂದ್ರಿಯಾದಿ ನಾಡಿಗಳು ಅಧೋಮಾರ್ಗವನ್ನು ಹೊಂದಿ ವಿಷಯದ ಕಲ್ಮಶವನ್ನು ಬೆರೆತು ಜೀವನವನ್ನು ಬಂಧನಕ್ಕೀಡುಮಾಡುವುವು.

ಈ ಬಂಧನದಿಂದ—ಬಿಡುಗಡೆಯಾಗಬೇಕಾದರೆ ದೇಹಾದಿ ನಾಡಿಗಳನ್ನು ಈ ಬಂಧನದಿಂದ ಸ್ವಚ್ಛಮಾಡಿ, ಮನಸ್ಸನ್ನು ಯಮ, ನಿಯಮದಿಂದ ಶುದ್ಧಮಾಡಿ ಮತ್ತು ಅದಕ್ಕೆ ಸಂಬಂಧಿಸಿದ ಪ್ರಾಣ ಮನಸ್ಸನ್ನು ಉಜ್ವಲವಾಗಿ ಮಾಡುವುದೇ ಯೋಗಾಭ್ಯಾಸದ ಕಾರ್ಯವು. ಯಮನಿಯಮ—ಯೋಗಮಾರ್ಗವನ್ನು ಅನುಸರಿಸಿ, ಪಂಚಭೂತಗಳನ್ನು ಗೆದ್ದು ಆತ್ಮಲಾಭವಾಗಬೇಕಾದರೆ ಯೋಗ್ಯ ಗುಣಗಳ ಸಾಧನೆಯನ್ನು ಮಾಡಬೇಕು. ವ್ಯವಹಾರದಲ್ಲಾದರೂ ಯಾವ ಕಾರ್ಯವನ್ನು ಸಾಧಿಸ

ಬೇಕಾದರೆ ಆಲಸ್ಯ, ಕ್ರೋಧ, ಇಂದ್ರಿಯಾಸಕ್ತಿ ಮುಂತಾದ ಕೆಟ್ಟ ಗುಣಗಳನ್ನು ತ್ಯಜಿಸಿ ನೀತಿಯ ಮಾರ್ಗವನ್ನು ಹಿಡಿಯಬೇಕು. ಪಾರಮಾರ್ಥದಲ್ಲಿ ಆದರೋ ಶಮಾದಿ ಗುಣಗಳು ಇದ್ದೇ ಇರಬೇಕು. ಯೋಗದಿಂದ ಲಭಿಸುವ ಜ್ಞಾನವೂ ಸಾಮರ್ಥ್ಯವೂ ಅಸಾಧಾರಣವಾದ್ದರಿಂದ ನಮ್ಮ ಕರಣಗಳು ಶುದ್ಧವಾದುದಲ್ಲದೆ ಮನಸ್ಸಿಗೂ ಮತ್ತು ದೇಹಕ್ಕೂ ಅಪಾಯಗಳು ಬರುವವು. ಈ ಎಲ್ಲಾ ದೇಹ ಮತ್ತು ಮನಸ್ಸಿನ ತಾಪಗಳನ್ನು ಸಹಿಸಿ ಪಾರಮಾರ್ಥದ ಕಠಿಣ ಮಾರ್ಗವನ್ನು ಹಿಡಿಯಬೇಕಾದರೆ ಯಮಾದಿ ಗುಣಗಳಿಂದ ದೇಹ ಮತ್ತು ಚಿತ್ತದ ಮಲಗಳನ್ನು ಕಳೆಯಬೇಕು. ಹೀಗೆ ಅಹಿಂಸಾ, ಸತ್ಯ, ಆರ್ಜವ (ನಿಷ್ಕಪಟತೆ), ಬ್ರಹ್ಮಚರ್ಯ, ಕ್ಷಮಾ, ಧೃತಿ, ದಯಾ, ಮಿತಾಹಾರ, ಈಶ್ವರಭಕ್ತಿ ಎಂಬ ಯಮಾದಿ ಗುಣಗಳಿಂದ ದೇಹ ಮತ್ತು ಮನಸ್ಸನ್ನು ಸ್ಥಿರಮಾಡಿದರೆ ಪ್ರಾಣಯಾಮ ಮತ್ತು ಧ್ಯಾನವನ್ನು ಸುಲಭ ರೀತಿಯಿಂದ ಸಾಧಿಸಬಹುದು. ಆದುದರಿಂದ ಮುಮುಕ್ಷುವು ಅಭ್ಯಾಸಯೋಗದಲ್ಲಿ ಹೇಳಿದ ಯಮನಿಯಮದಲ್ಲಿ ಅಡಕವಾಗಿರುವ ಗುಣಗಳನ್ನು ಅಭ್ಯಾಸಿಸಿ ಸಾಧನಾ ಮಾರ್ಗವನ್ನು ಅವಲಂಬಿಸಬೇಕು. ಈ ಗುಣಗಳು ಅಭ್ಯಾಸಮಾಡುತ್ತಾ ಚಂಚಲತ್ವವೂ ಕಮ್ಮಿಯಾಗಿ ಈಶ್ವರನಲ್ಲಿ ಮನಸ್ಸು ಇಡಲು ಪಾತ್ರನಾಗುವನು.

ಆಸನ—ಮನಸ್ಸು ಇಂದ್ರಿಯಗಳು ಯಮ, ನಿಯಮದಿಂದ ಸ್ತಿರತೆಯನ್ನು ಪಡೆದರೂ, ದೇಹದಲ್ಲಿ ಅಶಕ್ತತೆ ಅಥವಾ ಅಶುದ್ಧತೆ ಇದ್ದರೆ ಸಾಧನಗಳಲ್ಲಿ ಅಭ್ಯಂತರ ಬರುವುದು. ಹೀಗೆ ದೇಹ ಮತ್ತು ಶರೀರಾಂತರ್ಗತವಾದ ನಾಡಿಗಳು ದೃಢೀಕರಿಸುವ ಕಾರ್ಯವು ಆಸನದಿಂದ ಸಾಧ್ಯವಾಗುವುದು. ರಾಜಸ ಆಸನಗಳಿಂದ ದೇಹವನ್ನು ಬಲವಾಗಿ ಮಾಡಿ (ಪದ್ಮಾಸನ, ಚಿತ್ರಾಸನ, ಬ್ರಹ್ಮಪೀಠ, ಸಿದ್ಧಾಸನ, ಸ್ವಸ್ತಿಕಾಸನ) ಎಂಬ ಸಾತ್ವಿಕ ಭಾವವನ್ನುಂಟುಮಾಡುವ ಆಸನಗಳಲ್ಲಿ ಮೂರು ನಾಲ್ಕು ಘಳಿಗೆ ಸ್ಥಿರವಾಗಿ ಕೂತುಕೊಳ್ಳುವ ಅಭ್ಯಾಸವನ್ನು ಮಾಡಬೇಕು. ತರುವಾಯ ಚಲಿಸದೆ ಕೂತು ದೃಷ್ಟಿಯನ್ನು ನಾಸಿಕಾಗ್ರಹದಲ್ಲಿಡುವ ಪ್ರಯತ್ನಮಾಡಿದರೆ ದೇಹವು ಬಲಹೊಂದಿ ಮನಸ್ಸು ಸ್ಥಿರ

ವಾಗುತ್ತ ಬರುವವು. ಇನ್ನು ಜ್ಞಾನವನ್ನು ಹೊಂದಬೇಕಾದರೆ, ಪ್ರಾಣಾಯಾಮದ ಅಭ್ಯಾಸವನ್ನು ಮಾಡಬೇಕು.

ಪ್ರಾಣಾಯಾಮ—ಅಂದರೆ ಪ್ರಾಣ ಅಪಾನಗಳ ಗತಿಯನ್ನು ನಿರೋಧಿಸುವುದು. ಪ್ರಾಣದ ಚಲನೆಯಿಂದ ಚಿತ್ತಾದಿ ಇಂದ್ರಿಯಗಳು ಚಂಚಲತ್ವವನ್ನು ಹೊಂದುವುದರಿಂದ ಪ್ರಾಣದ ಗತಿಯನ್ನು ನಿಲ್ಲಿಸಿದರೆ, ನಾಡಿಗಳು ಸ್ವಾಧೀನವಾಗಿ ಇಂದ್ರಿಯಗಳ ವ್ಯಾಪಾರವು ಅಡಗಿ ಮನಸ್ಸು ಕೂಡ ಸ್ಥಬ್ಧವಾಗಿ ಚೈತನ್ಯಸ್ವರೂಪದಲ್ಲಿ ಐಕ್ಯ ಹೊಂದುವುದು. ದೇಹ ದಲ್ಲಿ ಪ್ರಾಣವು ಮುಖ್ಯವಾಗಿ ಇಡಾ, ಪಿಂಗಳಾ, ಸುಷುಮ್ನಾ, ಎಂಬ ಮೂರು ನಾಡಿಗಳನ್ನು ಆಶ್ರಯಿಸಿ ಇರುವದು. ಇಡಾ, ಪಿಂಗಳಾ, ಎಂಬ ನಾಡಿಗಳು ಚಿತ್ತವನ್ನು ಚಲಿಸಿ ವಿಷಯದ ಕಡೆಗೆ ತಿರುಗುವ ಮಾರ್ಗಗಳು. ಆದುದರಿಂದ ಸಾಧಕನು ಪ್ರಾಣಾಯಾಮದಿಂದ ನಾಡಿಶೋಧನೆಯನ್ನು ಮಾಡಿ, ತದನಂತರ ಪ್ರಾಣವನ್ನು ಇಡಾ ಮತ್ತು ಪಿಂಗಳೆಗಳನ್ನು ತಡೆದು ಶಕ್ತಿಸ್ಥಾನವಾದ ಸುಷುಮ್ನಯಲ್ಲಿ ಸೇರಬೇಕು.

ಈ ಮೂರು ನಾಡಿಗಳಲ್ಲಿ ಪ್ರಸಿದ್ಧವಾದುದು ಸುಷಮ್ನಾ ನಾಡಿ. ಅದು ಗುದಸ್ಥಾನದಲ್ಲಿರುವ ಆಧಾರಚಕ್ರದಿಂದ ಕಪಾಲಪರಿಯಂತರ ವೀಣೆಯ ದಂಡಿನಂತೆ ವ್ಯಾಪಿಸಿರುವದು. ಈ ವೀಣಾದಂಡಿಗೆ ಆಧಾರ, ಸ್ವಾಧಿಷ್ಠಾನ, ಮಣಿಪೂರಕ, ಅನಾಹತ, ಅಜ್ಞಾತ, ಮತ್ತು ಸಹಸ್ರದಳ ಎಂಬ ಏಳು ಚಕ್ರಗಳು ಜೋಡಿಸಿರುವವು.. ಇದರ ಎಡಗಡೆ ಇಡಾ ಎಂಬ ಚಂದ್ರನಾಡಿಯೂ, ಬಲಗಡೆ ಪಿಂಗಳವೆಂಬ ಸೂರ್ಯನಾಡಿಯೂ ಇರುವದು. ಇಡಾ, ನಾಡಿಯು ಮೂಲಾಧಾರದಿಂದ ಕಪಾಲಪರಿಯಂತ ಬಂದು ತಾಗಿ ಅಲ್ಲಿರುವ ಚಂದ್ರಮಂಡಲವನ್ನು ವ್ಯಾಪಿಸಿಕೊಂಡು ತಿರುಗಿ ಎಡಮೂಗಿನಲ್ಲಿ ಉಸುರು ಹೊರಟುಹೋಗುವದು. ಪಿಂಗಳಾ ನಾಡಿಯು ಮೂಲಾಧಾರದಿಂದ ಕಪಾಲಪರಿಯಂತ ಬಂದು ತಾಗಿ ಅಲ್ಲಿರುವ ಸೂರ್ಯಮಂಡಲವನ್ನು ವ್ಯಾಪಿಸಿಕೊಂಡು ತಿರುಗಿ ಬಲಮೂಗಿನಲ್ಲಿ ಉಸಿರು ಹೊರಟು ಹೋಗುವದು. ಸುಷುಮ್ನಾ, ನಾಡಿಯು ಬೆನ್ನೆಲು ಬಿನ ಮಧ್ಯದಲ್ಲಿ ಇದೇ ರೀತಿ ಇದ್ದು ವಾಯು ಚಲನೆಯಿಲ್ಲದೆ ಸುಮ್ಮ

ನಿರುವುದು. ಇವು ಮೂರೂ, ನಾಸಾಗ್ರದಲ್ಲಿಯೂ, ಆಜ್ಞಾಚಕ್ರದಲ್ಲಿಯೂ, ಕೂಡಿರುವವು. ಆದುದರಿಂದ ನಾಸಾಗ್ರದಲ್ಲಿ ಮನಸ್ಸನ್ನಿಟ್ಟು ಹಂಸರೂಪವನ್ನು ಧ್ಯಾನಿಸಿದರೆ ಮನಸ್ಸು ಜಯಿಸುವದು. ಇದೇ ಶಾಂಭವೀಮುದ್ರೆ. ಈ ಅಭ್ಯಾಸದೊಂದಿಗೆ ಪ್ರಾಣಾಯಾಮದ ಅಭ್ಯಾಸವನ್ನು ಸೇರಿಸಿದ್ದಲ್ಲಿ ಧ್ಯಾನವು ಸರಿಯಾಗಿ ನಿಂತು ಚಿತ್ತವು ಸುಷುಮ್ನೆಯಲ್ಲಿ ಪ್ರವೇಶಿಸಿ ಜಿತ್ ಸ್ವರೂಪವನ್ನು ಹೊಂದುವುದು. ರೇಚಕ, ಪೂರಕ, ಕುಂಭಕ, ಎಂಬದಾಗಿ ಪ್ರಾಣಾಯಾಮವು ಮೂರು ವಿಧವಾದ ಲಕ್ಷಣ ಉಳ್ಳದು. ಇದರಲ್ಲಿ ಮೂಗಿನ ಸೊಳ್ಳೆಯಿಂದ ಒಳಗೆ ಸೇಯುವುದು ಪೂರಕವೆಂತಲೂ, ಇದರ ಮೇಲೆ ಅಂತರಾಕಾಶದಲ್ಲಿ ನಿಲ್ಲಿಸುವದು ಕುಂಭಕವೆಂತಲೂ, ಹೊರಕ್ಕೆ ಬಿಡುವದು ರೇಚಕವೆಂತಲೂ ಅನ್ನುತ್ತಾರೆ. ಒಂದು ಪ್ರಾಣಾಯಾಮದಲ್ಲಿ ಹನ್ನೆರಡು ಮಾತ್ರೆ ಪೂರಕವನ್ನು ಮಾಡಿ ಪ್ರಾಣವನ್ನು ಏರಿಸಬೇಕು ಮತ್ತು ಹದಿನಾರು ಮಾತ್ರ ಕುಂಭಕ ಮಾಡಿ ನಿಲ್ಲಿಸಿ, ಇಪ್ಪತ್ತುನಾಲ್ಕು ಮಾತ್ರೆ ರೇಚಕದಿಂದ ಇಳಿಸಬೇಕು.

ಪ್ರಾಣಾಯಾಮದ ಫಲ—ಈ ರೀತಿಯಿಂದ ಪ್ರಾಣಾಯಾಮವನ್ನು ಸಾಧಿಸಿದ್ದಲ್ಲಿ ಮೂಲಾಧಾರದಲ್ಲಿ ನಿದ್ರೆಯನ್ನು ತಾಳಿದ ಅಂತಃಕರಣರೂಪವಾದ ಕುಂಡಲಿಯು ತನ್ನ ಸ್ವರೂಪದ ನೆನಪಿನಿಂದ ಜಾಗ್ರತೆಯನ್ನು ಹೊಂದಿ ಅಥವಾ ಜ್ವಾಲಾರೂಪದಿಂದ ಮೇದ ಮಾಂಸವನ್ನು, ಎಲ್ಲಾ ನಾಶ ಮಾಡಿ, ಲಿಂಗಸ್ಥಾನದಲ್ಲಿರುವ ಸ್ವಾಧಿಷ್ಠಾನ ಅಥವಾ ಪೃಥ್ವೀತತ್ವಕ್ಕೆ ತೆರಳುವಳು. ಅಲ್ಲಿ ಇರುವ ಉದಕಾಂಶವನ್ನು ಶೋಷಣಮಾಡಿ ತನ್ನ 3½ ಪಾಲನ್ನು ಬಿಟ್ಟು ಊರ್ಧ್ವಗಮನ ಮಾಡಿ ಅಗ್ನಿಸ್ಥಾನವಾದ ಮಣಿಪೂರಕಕ್ಕೆ ಬರುವಳು. ಇಲ್ಲಿ ಅವಳು ರಕ್ತವರ್ಣದಿಂದ ಭಾಸವಾಗಿ ಚಿತ್ತದ ಮಲಿನಗಳನ್ನೆಲ್ಲಾ ನಾಶಮಾಡಿ ಮುಂದಕ್ಕೆ ತೆರಳುವಳು. ಈ ನಾಭಿಸ್ಥಾನದಲ್ಲಿ ಸಾಧಕನಿಗಾದರೋ ಅನೇಕ ವೇದನೆಗಳುಂಟಾಗಿ ಕಷ್ಟವಾಗುವದು. ಅವನ್ನು ಧೈರ್ಯ ವ ಗುರುವಿಶ್ವಾಸದಿಂದ ಜಯಿಸಲು ಬೇಕು. ಹಾಗುಎಲ್ಲಾ ವರೋ ಯಾವ ದೃಶ್ಯಗಳು ತೋರಿದರೂ ಅವು ಮನೋಮಯವಾಗಿ ಮಿಥ್ಯವೆಂದು ಎಣಿಸಿ ಅವನ್ನು ತ್ಯಜಿಸಿ ತನ್ನ ಸ್ವರೂಪವನ್ನೇ ಜಪರೂಪ

ಅಕಾರಗಳಿಂದ ಲಕ್ಷ್ಯವನ್ನಾಗಿ ಮಾಡಿ ಮುಂದೆ ಹೋಗಬೇಕು. ಅನಾಹತ ಸ್ಥಾನದಲ್ಲಿ ಕುಂಡಲಿನಿಯು ನಾದರೂಪವಾಗಿಯೂ, ಅನೇಕ ಜ್ಯೋತಿರೂಪವಾಗಿ ತೋರಿ ಮುಂದೆ ವಿಶುದ್ಧ ಸ್ಥಾನದಲ್ಲಿ ತಟಸ್ಥ ಭಾವವನ್ನು ಹೊಂದಿ ಆಜ್ಞಾಚಕ್ರವನ್ನು ಮುಟ್ಟುವಳು. ಇಲ್ಲಿಯಾದರೂ ಮಾರ್ಗವು ಬಹಳ ಕಠಿಣವಾಗಿದ್ದು ಬಲು ಜಾಗ್ರತೆಯಿಂದಲು ಮುಂದೆ ಹೋಗಬೇಕು. ಇಲ್ಲಿ ನಿಧಾನವಾಗಿ ನಿಲ್ಲಲಿಕ್ಕೆ ಕಲಿತು ತ್ರಿಕುಟಿ ಅಥವಾ ಇಡಾ, ಪಿಂಗಳಾ, ಮತ್ತು ಸುಷುಮ್ನಾ ಕೂಡುವ ಸ್ಥಳದ ದ್ವಾರವನ್ನು ಧ್ಯಾನದಿಂದ ಸ್ಥಿರವಾಗಿ ನಿಲ್ಲಿಸಲಿಕ್ಕೆ ಅಭ್ಯಾಸವನ್ನಿಟ್ಟು, ಊರ್ಧ್ವಮಾರ್ಗದ ದ್ವಾರವನ್ನು ತೆರೆಯಬೇಕು.

ಧ್ಯಾನ—ಅಂದರೆ ಮಂತ್ರರೂಪವಾದ ಇಷ್ಟದೇವತೆಯನ್ನು ಅಥವಾ ಪರಮಾತ್ಮಸ್ವರೂಪನಾದ ಹಂಸಸ್ವರೂಪವನ್ನೆ ಸ್ಮರಣೆಮಾಡುವುದು. ಇಷ್ಟದೇವತೆಯನ್ನು ಮಂತ್ರದ್ವಾರಾ ನಾಸಿಕಾಗ್ರದಲ್ಲಿ ದೃಷ್ಟಿಯಿಟ್ಟು ಜಪಮಾಡುವುದೇ ಧ್ಯಾನ. ಈ ಜಪದಲ್ಲಿ ವೈಖರಿ, ಮಧ್ಯಮ, ಪಶ್ಯಂತಿ, ಎಂದು ಮೂರುವಿಧ. ಜಪಾಕ್ಷರಗಳನ್ನು ಜಿಹ್ವೆಯಿಂದ ಘಟ್ಟಿಯಾಗಿ ಉಚ್ಚರಿಸಿ ಹೇಳುವುದು ವೈಖರಿ ರೂಪಾತ್ಮಕವಾದ ಸಾಧನೆ. ಹೀಗೆ ಬಾಯಿಂದ ಉಚ್ಚರಿಸದೆ ಮನಸ್ಸಿನಲ್ಲಿಯೇ ಹೇಳಿದರೆ ಮಧ್ಯಮ ವಾಚೆಯ ಸಾಧನವು. ಏಕಾಗ್ರಚಿತ್ತದ ಜಪದಿಂದ ಉಂಟಾದ ಧ್ಯಾನಾಗ್ನಿಯಲ್ಲಿ ಲೀನವಾಗುವುದಕ್ಕೆ ಪಶ್ಯಂತಿ ಎಂದು ಹೆಸರು.

ಇದರಲ್ಲಿ ವೈಖರಿಯ ಸಾಧನೆಯು ಕನಿಷ್ಟವು. ಮಧ್ಯಮ ವಾಕ್ಕಿನ ಸಾಧನೆಯು ಮಧ್ಯಮವು; ಮತ್ತು ಪಶ್ಯಂತಿ ವಾಕ್ಕಿನ ಸಾಧನೆಯು ಶ್ರೇಷ್ಠವು. ಮಧ್ಯದಲ್ಲಿ ಸೂಕ್ಷ್ಮರೂಪ ಜಪದ ಧ್ವನಿಯು ಗೋಚರವಾಗಿ, ಪಶ್ಯಂತಿಯಲ್ಲಿ ಜ್ಯೋತಿರೂಪವಾಗಿ ಗೋಚರವಾಗಿ, ಸಾಧಕನಿಗೆ ಆತ್ಮಾನಂದವನ್ನು ಉಂಟುಮಾಡಿ, ಎಲ್ಲಾ ಲೌಕಿಕ ಆಸಕ್ತಿಯನ್ನು ಹೋಗಲಾಡಿಸುವುದು. ಹೀಗೆ ಸಾಧನೆಯು ಬಲವು ಹೆಚ್ಚುತ್ತಾ ತನ್ನಷ್ಟಕ್ಕೆ ಚಿತ್ತವು ಸ್ಥಿರತೆಯನ್ನು ಹೊಂದಿ ಆನಂದದ ಅವಿಭಾಗವಾಗುವುದು. ಈ ಧ್ಯಾನದ

ಏಕಾಗ್ರ ಬಲದಿಂದಲೇ ಪ್ರಾಣಾಯಾಮವು ಸಾಧನೆಯು ಸಹಾ ಮುಂದ ರಿಸಿ ನಿಜಸುಖದ ಲಾಭವು ದೊರೆಯುವದು. ಹೀಗೆ ವಿಷಯಗಳ ಯಾ ನಮ್ಮ ಮನಸ್ಸನ್ನು ಉದ್ವೇಗಗೊಳಿಸುವದನ್ನು ನಿಲ್ಲಿಸಿ, ಸ್ವರೂಪಾನಂದ ದಲ್ಲಿ ಲೀನ ಹೊಂದಿದ ವಿನಾ ನಮಗೆ ಸಂಸಾರದಿಂದ ಬಿಡುಗಡೆ ಇಲ್ಲವು. ಧ್ಯಾನವನ್ನೇ ದಿನಕ್ಕೆ 2, 3 ಸರ್ತಿ ಮಾಡಿದೆನೆಂಬ ಗರ್ವದಿಂದ ಅಸಡ್ಡೆ ಯನ್ನು ಮಾಡಿದರೆ ತನ್ನ ಸ್ವತಂತ್ರರೂಪವಾದ ಆತ್ಮಸಾಮ್ರಾಜ್ಯವನ್ನು ವಿಷಯಗಳು ನಿಷ್ಫಲಮಾಡಿ ಸೆಳೆದುಕೊಳ್ಳುವವು. ಪ್ರಾಣಾಯಾಮವನ್ನು ಪ್ರತಿ ದಿವಸ ಕ್ಲಪ್ತಕಾಲದಲ್ಲಿ ಮೂರು ಸರ್ತಿ ಮಾಡಿದ್ದಲ್ಲದೆ ಧ್ಯಾನದ ಅಭ್ಯಾಸವನ್ನು ಯಾವಾಗಲೂ ನಡಿಸಬೇಕು. ಹೀಗೆ ನಡಿಸಿದ್ದಲ್ಲಿ ತಮ ಮತ್ತು ರಜೋಗುಣಗಳ ಬಲವು ಕುಂದಿ ಶುದ್ಧ ಸತ್ವದ ಪ್ರಕಾಶವು ಹುಟ್ಟಿ, ಜ್ಞಾನವು ಉದಯವಾಗುವದು. ಹೀಗೆ ನಾನು ಆತ್ಮಸ್ವರೂಪನಿದ್ದು ವಿಷ ಯಾದಿ ನಾಮರೂಪಗಳಿಗೆ ಒಳಗಾಗಿಲ್ಲಾ ಎಂಬ ವಿಚಾರದಿಂದಲೂ, ಧಾರಣೆಯ ಅಭ್ಯಾಸದಿಂದಲೂ ತನ್ನ ಸ್ವತಃಸಿದ್ಧವಾದ ಆತ್ಮಸಾಮ್ರಾಜ್ಯ ವನ್ನು ಪಡೆಯಬೇಕು.



# ಜ್ಞಾನಯೋಗ.



ಅಜ್ಞಾನಿಗಳಾದ ಜನರು ಸುಖದ ಸಲುವಾಗಿ ಅನೇಕ ಪ್ರಯತ್ನ ವನ್ನು ನಡಿಸುತ್ತಿದ್ದಾರೆ. ಕೆಲವರು ವಿಷಯಸುಖದಲ್ಲಿ ಮಗ್ನರಾಗಿ ತಮ್ಮ ಧನ, ಸೊತ್ತು ಮತ್ತು ಅಮೂಲ್ಯವಾದ ಶಕ್ತಿಯನ್ನು ಕಳಕೊಳ್ಳು ತ್ತಿದ್ದಾರೆ. ಮತ್ತು ಕೆಲವರು ಲೋಕದ ವಿಷಯಗಳು ನಶ್ವರವೆಂದು ತಿಳಿದು ಯೋಗ, ಭಕ್ತಿ ಮುಂತಾದ ಸಾಧನಗಳನ್ನು ಮಾಡುತ್ತಿದ್ದಾರೆ. ಯೋಗ, ಭಕ್ತಿ ಸಾಧನೆಗಳು ದಿವ್ಯಲೋಕದ ಅನುಭವಗಳನ್ನು ಕೊಟ್ಟರೂ, ಇವೆಲ್ಲವೂ ಮಾಯಿಕ ಜಗತ್ತಿನ ಜ್ಞಾನವಾಗಿದ್ದು, ಅಖಂಡವಾದ ಸತ್ ಸ್ವರೂಪದ ಸುಖವನ್ನು ಪೂರೈಸಿಕೊಡಲಿಕ್ಕೆ ಅಶಕ್ಯವಾಗಿರುತ್ತವೆ. ಕಾರಣ, ಒಬ್ಬ ಸಾಧಕನು ಯೋಗಾಭ್ಯಾಸದಿಂದ ಅಥವಾ ಭಕ್ತಿಯಿಂದ ತನ್ನ ದೇವತಾ ಸ್ವರೂಪನ್ನು ಕಂಡುಹಿಡಿದರೂ, ಧ್ಯಾನ ನಿಮಿತ್ತ ಅವನ ಮನಸ್ಸು ನಿಜಸ್ವರೂಪದಲ್ಲಿ ಲೀನವಾಗಿರದೆ ಇರುವುದರಿಂದ, ದೇವತಾಚಿಂತನೆ ಬಿಟ್ಟ ಒಡನೆಯೇ ಪೂರ್ಣ ದೇಹಭಾವವು ತಗಲಿ, ಪ್ರಪಂಚದ ವಿಷಯಗಳಿಂದ ಉಂಟಾಗುವ ಭಯ ಮೋಹಗಳಿಗೆ ಒಳಗಾಗುವನು. ಅದಲ್ಲದೆ, ಯಾವ ಸಾಧನೆ ಎಂದರೂ ದೇಹಭಾವ ಮತ್ತು ತಾನು ಸಾಧನೆಯನ್ನು ನಡೆಸುವ ಕರ್ತೃತ್ವ ಅಹಂಕಾರದಿಂದ ಕೂಡಿ ಇರುವದರಿಂದ ಕರ್ಮದ ಸಾಧನೆಯೇ ಹೆಚ್ಚಾಗಿ, ಕರ್ಮಬೀಜ ಫಲರೂಪವಾದ ಲೋಕದ ಸುಖ ದುಃಖಗಳಿಗೆ ಈಡಾಗುವನು. ಆದುದರಿಂದ ಅಜ್ಞಾನ ಸಮ್ಮಂಧದಿಂದ ಉಂಟಾಗುವ ಪ್ರಪಂಚಭಾವಕ್ಕೂ, ಕರ್ತೃತ್ವ ಭಾವದಿಂದ ತಪ್ಪಿ ಬಿಡುಗಡೆ ಹೊಂದಿ, ಸುಖ ಪಡೆಯಬೇಕಾದರೆ ನಿತ್ಯ ಸತ್ಯ ಬುಧ್ ಸ್ವರೂಪವನ್ನು ತಿಳಿಯಬೇಕು. ಒಬ್ಬ ಕಾಮುಕನು ವಿಷಯಾಸಕ್ತಿಯನ್ನು ಬಿಟ್ಟು ತನ್ನ ಸ್ವಸಿದ್ಧವಾದ ಆರೋಗ್ಯ ಮತ್ತು ಮನಸ್ಸಿನ ಪ್ರಸನ್ನತೆಯಿಂದ ಹ್ಯಾಗು ಸುಖ

ವನ್ನು ಅನುಭವಿಸುತ್ತಾನೋ, ಹಾಗೆಯೇ ಜ್ಞಾನಿಯು ಎಲ್ಲಾ ಹಾನಿಗೆ ಕಾರಣವಾದ ಮನಸ್ಸಿನ ಪ್ರಪಂಚವನ್ನು ಬಿಟ್ಟು ತನ್ನ ನಿಜಸ್ವರೂಪ ಆನಂದದಲ್ಲಿ ಮಗ್ನನಾಗುತ್ತಾನೆ. ಈ ಸ್ವರೂಪಾನಂದವನ್ನು ಪಡೆಯು ಲಿಕ್ಕೆ ಯಾವ ಹೋರಾಟವೂ, ಕಷ್ಟವೂ ಇಲ್ಲದೆ, ನೈತಿಕ ವ್ಯವಹಾರ ಸಮಯದಲ್ಲಿ ಸಹ ಸಾಧಿಸಬಹುದು. ತನ್ನ ನಿಜಸ್ವರೂಪದ ಅನುಸಂಧಾನವು ಸುಖಪ್ರದವಾಗಿದ್ದು ಈ ಪ್ರಪಂಚದ ಮಿಥ್ಯಾರೂಪವನ್ನು ಹೋಗಲಾಡಿಸಿ ನಿಜಸುಖದ ಆನಂದವನ್ನು ಸತತ ನಮಗೆ ಕೊಡುವದು. ಈ ಸ್ವರೂಪ—ಜ್ಞಾನವಾದ ಬಳಿಕ ದುಃಖರೂಪವಾದ ವಿಷಯರೂಪ, ಅಡಗಿ ಎಲ್ಲಾ ಭೂತಗಳಲ್ಲಿಯೂ ಚಿತ್ ಸ್ವರೂಪವೇ ತೋರುವದು. ಹಾಗೆಯೇ ಎಲ್ಲಾ ವಿಷಯದಲ್ಲಿಯೂ ನಿಜ ಜ್ಞಾನವೂ ಆನಂದವೂ ನಮ್ಮ ಪಾಲಿಗೂ ಬರುವುದು. ಈ ರೀತಿಯಿಂದ ಜ್ಞಾನಮಾರ್ಗವು ಎಲ್ಲಾ ಮಾರ್ಗ ಕ್ಕಿಂತಲೂ ಉತ್ಕೃಷ್ಟವಾಗಿದ್ದು, ಸತ್ ಸ್ವರೂಪವನ್ನು ಪಡೆಯಲಿಕ್ಕೆ ಸುಲಭ ಉಪಾಯವು. ಜ್ಞಾನಿಯು ಲೋಕದ ವಿಷಯಗಳು ಜಡವಾದವುಗಳು ಮತ್ತು ಸರ್ವ ವಿಧದಿಂದಲೂ ದುಃಖಕ್ಕೇನೇ ಕಾರಣ ಎಂತ ಅವುಗಳನ್ನು ಬಿಟ್ಟುಕೊಟ್ಟು ನಿಜ ವಸ್ತುವಿನ ಕಡೆಗೆ ಲಕ್ಷ್ಯ ಇಡುತ್ತಾನೆ.

ವಿಷಯಾಸಕ್ತರಾದ ಜನರು ಈ ಲೋಕದ ನಾಮರೂಪದ ಕಡೆಗೆ ದೃಷ್ಟಿ ಇಟ್ಟು ತಿರುಗಾಡಿ, ತಿಂದು, ಮಲಗಿ, ಕ್ಷಣಿಕ ಸುಖವನ್ನು ಪಡೆ ಯುತ್ತಾರೆ. ಆದರೆ ಈ ವಿಷಯಗಳು ಮನುಷ್ಯನ ತೃಷ್ಣೆಯನ್ನು ಹೆಚ್ಚಿಸುವುದಲ್ಲದೆ ಸ್ವರೂಪದ ಜ್ಞಾನವನ್ನು ಕೊಡದೆ ಪರಿಪರಿಯಲ್ಲಿ ನಮ್ಮನ್ನು ಈ ಪ್ರಪಂಚದ ಅಧೀನರಾಗಿ ಮಾಡುವವು. ಆದಕಾರಣ ಸ್ವರೂಪ ಸ್ಥಿತಿಯನ್ನು ಪಡೆಯಲಿಕ್ಕೆ ಇಚ್ಛಿಸುವವನು ಈ ಮಿಥ್ಯಾಭ್ರಮೆ ಯನ್ನು ಉಂಟುಮಾಡುವ ನಾಮರೂಪಗಳನ್ನು ನಿರಾಕರಿಸಲಿಕ್ಕೆ ಶಮಾದಿ ಗುಣಗಳಿಂದ ಕೂಡಿ, ಯೋಗ್ಯನಾದ ಗುರುವಿನಿಂದ ಜ್ಞಾನವನ್ನು ಪಡೆಯ ಬೇಕು. ಅಧಿಕಾರಿಯ ಗುಣಗಳು ಇಲ್ಲದೇ ಸುಮ್ಮನೇ ಉಪದೇಶ ಪಡೆದಲ್ಲಿ ವಿಷಯಬಾಧೆಗಳಿಂದ ಚಂಚಲತ್ವವುಂಟಾಗಿ ಜ್ಞಾನವು ಫಲಿಸದು.

ಈ ಜ್ಞಾನವು ದೃಢವಾಗುವ ಉದ್ದೇಶದಿಂದಲೇ ಮುಂಚಿನ ಕರ್ಮ, ಯೋಗ, ಭಕ್ತಿಸಾಧನೆಗಳು ಹೇಳಲ್ಪಟ್ಟವು. ಈ ಸಾಧನೆಗಳಿಂದ ಶಮಾದಿ ಗುಣಗಳನ್ನು ಪಡೆದು ಕರ್ಮಮಾರ್ಗದಿಂದ ಮನಸ್ಸಿನ ಜಡಭಾವವನ್ನು, ಯೋಗದಿಂದಾಗಲೀ ಭಕ್ತಿಯಿಂದಾಗಲೀ ಏಕಾಗ್ರತೆಯನ್ನು ಪಡೆದಲ್ಲಿ, ಎಲ್ಲಾ ಸೃಷ್ಟಿಯ ಆಧಾರವಾದ ಸತ್ ಸ್ವರೂಪದಲ್ಲಿ ಲೀನವಾಗುವ ಸ್ಥಿತಿಯು ಬಹಳ ಸುಲಭದಿಂದ ಗುರುಸಹಾಯದಿಂದ ಪ್ರಾಪ್ತವಾಗುವುದು.

ಆದುದರಿಂದ ಆರಂಭದಲ್ಲಿ ಶಮ, ದಮ, ತಿತಿಕ್ಷಾ, ಶ್ರದ್ಧಾ, ಸಮಾಧಾನ ಮತ್ತು ಮುಮುಕ್ಷುತ್ವ ಎಂಬ ಷಟ್ ಸಂಪತ್ತಿಯನ್ನು ಸಂಪಾದಿಸಲೇಬೇಕು.

ಅಧಿಕಾರಿಯ ಗುಣಗಳು ಇಲ್ಲದೇ ಸುಮ್ಮನೇ ಉಪದೇಶ ಪಡೆದಲ್ಲಿ ಜ್ಞಾನವು ಆಗದು. ಆದುದರಿಂದ ಮುಂಚೆ ಶಮಾದಿ ಷಟ್ ಸಂಪತ್ತಿ ಪಡೆಯಲು ಯತ್ನಿಸಬೇಕು. ಶಮವೆಂದರೆ—ಈ ನಾಮರೂಪಾದಿ ಭೇದಗಳನ್ನು ಕಲ್ಪಿಸುವ ಮನಸ್ಸಿನ ನಿಗ್ರಹ. ಪ್ರಮೋದವೆಂಬುದೆಲ್ಲವೂ ಕಾಮನಾ ಅಥವಾ ವಾಸನಾರೂಪವಾಗಿರುವದೆಂದು ವಾಸನೆಗಳನ್ನು ಕಮ್ಮಿಮಾಡುವುದು. ದಮ ಅಂದರೆ—ಬಾಹ್ಯ ವಿಷಯಗಳನ್ನು ಜಯಿಸುವುದು.

ತಿತಿಕ್ಷಾ—ಶೀತೋಷ್ಣ ಸುಖದುಃಖಾದಿ ದ್ವಂದ್ವಗಳನ್ನು ಜಯಿಸುವುದು. ಶ್ರದ್ಧಾ—ಬ್ರಹ್ಮನಿಷ್ಟ ಸದ್ಗುರುವಿನ ಬೋಧದಿಂದಲೂ, ಸೇವೆಯಿಂದಲೂ ತಾನು ಸಂಸಾರದಿಂದ ಮುಕ್ತನಾಗುವೆನೆಂದು ದೃಢವಿಶ್ವಾಸ. ಸಮಾಧಾನ—ಎಂದರೆ ಚಿತ್‌ರೂಪವನ್ನು ತಿಳಿಯಬೇಕೆಂದು ಮಾಡುವ ಏಕಾಗ್ರ ಪ್ರಯತ್ನ. ಮುಮುಕ್ಷುತ್ವ—ಎಂದರೆ ಸಂಸಾರದಿಂದ ಬಿಡುಗಡೆ ಹೊಂದಬೇಕೆಂಬ ಇಚ್ಛೆಯು.

ಈ ಮೇಲೆ ಹೇಳಿದ ಶಮಾದಿ ಸಂಪತ್ತನ್ನು ವೃದ್ಧಿಗೊಳಿಸಿ ಆತ್ಮತತ್ವದ ವಿಷಯ ವಿಚಾರವನ್ನು ಮಾಡಬೇಕು. ಆತ್ಮ ಮತ್ತು ಅನಾತ್ಮ

ವಿಚಾರಕ್ಕೆ ಆತ್ಮ ಅನಾತ್ಮ ವಿವೇಕ ಎಂತ ಹೇಳುತ್ತಾರೆ. ಆ ವಿವೇಕದ ರೀತಿಯು ಯಾವದೆಂದರೆ—

ದೇಹಾದಿ ವಿಷಯಗಳು ಜಡ, ಅನಿತ್ಯ ಮತ್ತು ತಾನು ಚೈತನ್ಯ ರೂಪನಾಗಿ ಸಾಕ್ಷಿ ಎಂದು ತಿಳಿಯುವುದೇ ವಿವೇಕ. ಈ ವಿವೇಕ ದಿಂದ ನೋಡಿದಲ್ಲಿ ಎಲ್ಲಾ ನಾಮರೂಪಾತ್ಮಕವಾದ ಜಗತ್ತು ಪಂಚಭೂತ ಗಳಿಂದ ಮಾಡಲ್ಪಟ್ಟು ಜಡ ಮತ್ತು ನಶ್ವರ ಎಂದು ತಿಳಿಯುವುದು. ಹೀಗಾದರೂ ಮಾಯಾ ಮೋಹದಿಂದ ಕೂಡಿದ ಮನುಷ್ಯರು, ಗ್ರಾಮ, ನಗರ, ತಟಾಕ, ನದಿ, ಸರೋವರ, ದೇಶ, ಖಂಡ ಎಂಬ ನಾಮ ರೂಪಾತ್ಮಕ ಪ್ರಪಂಚವನ್ನೂ, ಸತಿ, ಸುತ, ಸ್ನೇಹಿತ, ಶತ್ರು, ಬಂಧು, ಬಳಗ ಎಂಬ ಮೋಹಪ್ರಪಂಚವನ್ನೂ, ನಿರ್ಮಾಣಮಾಡಿ, ಸಂಸಾರ ಜಾಲವನ್ನು ತಂದೊಡ್ಡುವರು. ಹೀಗೆ ಅನೇಕ ವಿಚಿತ್ರ ನಾಮಭೇದ ಗಳಿಂದಲೂ, ನಾಮರೂಪಗಳಿಂದಲೂ, ಕೂಡಿದ ಜಗತ್ತಿನಲ್ಲಿ ತಮ್ಮ ಸ್ವರೂಪಜ್ಞಾನವಿಲ್ಲದೆ, ಸ್ತ್ರೀಪುರುಷರೆಂಬ ಅಹಂಕಾರವನ್ನು ಪಡೆದು ದೇಹಾದಿ ವಿಷಯಗಳೇ ನಿತ್ಯವೆಂದು ಎಣಿಸುವರು. ಹೀಗೆ ಜೀವನು ಅವಿ ವೇಕದಿಂದ ಉಂಟಾದ ಮೋಹದಿಂದ ಪ್ರಥ್ವಿರೂಪವಾದ ಹೆಣ್ಣನ್ನೂ, ಹೊನ್ನನ್ನೂ ಕೂಡಿಸಿ, ಹಿತಾಹಿತಗಳನ್ನು ನೋಡದೆ ಲೋಕದ ಸಂಪತ್ತನ್ನೇ ಘಳಿಸುವುದರಲ್ಲಿ ಕರ್ಮವನ್ನು ಬೆಳೆಸುವನು. ಈ ರೀತಿಯಲ್ಲಿ ಪ್ರಪಂಚದ ಆಸಕ್ತಿ ಹೆಚ್ಚುತ್ತಾ ಅಕಸ್ಮಾತ್ ತಾನು ಕೂಡಿಸಿಟ್ಟ ಧನವು ಕಳೆದು ಹೋಗಲು, ಅಥವಾ ಸತಿಸುತರು ತನ್ನನ್ನು ಬಿಟ್ಟುಹೋಗಲು, ದುಃಖ ದಿಂದ ಹಂಬಲಿಸುವನು.

ಹೀಗೆ ಸತಿಸುತರ ಮೋಹವೂ ವಿಷಯಗಳ ಮೇಲೆ ಆಶೆಯೂ ಅನೇಕ ಜನ್ಮಾಂತರದಿಂದ ಬಂದಿರುವುದರಿಂದ, ಅದು ನಾವು ಮಾಡುವ ವಿಷಯ ಧನತೃಷ್ಣೆಯಿಂದ ಹೆಚ್ಚುವುದಲ್ಲದೆ ಕಮ್ಮಿಯಾಗುವ ಸಂಭವ ವಿಲ್ಲ. ಹೀಗೆ ದೇಹಕರ್ಮದ ಗಾಡಿಯಲ್ಲಿ ಕೂತಿರುವ ಜೀವನು ಅನೇಕ ಲೋಕಗಳನ್ನೂ ತನ್ನ ಕರ್ಮನಿಮಿತ್ತ ಜನ್ಮಗಳನ್ನೂ ಪಡೆದು ಬಂದಿದ್ದಾನೆ.

ಸನ್ಯಾಶಿ ಆಶ್ರಮವನ್ನು ತೆಗೆದುಕೊಂಡ "ಭರತ" ಅರಸನಿಗಾದರೂ ಹುಲ್ಲೆಯ ಮೋಹದಿಂದ ಪುನರ್ಜನ್ಮವನ್ನು ಪಡಿಯಬೇಕಾಯಿತು. ನಾವಾದರೋ ಈ ನವೀನ ನಾಗರಿಕತೆಯ ಭರದಲ್ಲಿ ವಿಷಯುಗಳನ್ನೂ ಹೆಚ್ಚಿಸಿ ಭೋಗವಾಸನೆಯಿಂದ, ನಿಜಬ್ರಹ್ಮ ಸ್ವರೂಪವನ್ನು ಮರೆಮಾಡಿ ಅನೇಕ ಜೀವಿಗಳ ಭೋಗತೃಪ್ತಿಗೋಸ್ಕರ ಬ್ರಹ್ಮನಲ್ಲಿ ಸ್ಫುರಣವನ್ನುಂಟುಮಾಡಿ, ಮುಂದೆ ಚಲನವನ್ನು ಹೊಂದಿ ಹಿರಣ್ಯಗರ್ಭ ಸೂಕ್ಷ್ಮಸೃಷ್ಟಿಯನ್ನು ವೈಶ್ವಾನರರೂಪ ಸ್ಥೂಲ ಸೃಷ್ಟಿಯನ್ನುಂಟುಮಾಡಿದೆವು. ಅದೇ ಕಲ್ಪನೆಯು ವಾಸನಾರೂಪವಾದ ಜೀವನನ್ನೂ ಭೋಗವನ್ನೂ ಪಡೆಯುವುದಕ್ಕೆ ಎಂಭತ್ತನಾಲ್ಕು ಲಕ್ಷ ಯೋನಿಗಳಲ್ಲಿ ತಿರುಗಿಸಿ ಬಾಧೆಪಡಿಸುವದು. ಹೀಗೆ ನಮ್ಮನ್ನು ಜನ್ಮಕ್ಕೆ ತಂದ ಕಲ್ಪನಾರಾಕ್ಷಸಿಯ ಬಲದಿಂದ ಮುಕ್ತನಾಗಬೇಕಾದರೆ ವಿಷಯಗಳ ಕಲ್ಪನೆಯನ್ನು ಕಮ್ಮಿಮಾಡಿ, ತನ್ನ ದೇಹಾದಿ ಇಂದ್ರಿಯಗಳ ವಿಚಾರವನ್ನು ಮಾಡಬೇಕು. ಇದರಲ್ಲಿ ಮನುಷ್ಯನನ್ನು ಹೀಗೆ ಜನ್ಮಾದಿಗಳಿಗೆ ಸೆಳೆದು ಪ್ರಪಂಚ ಸೃಷ್ಟಿಯ ನಿರ್ಮಾಣಮಾಡುವ ಶಕ್ತಿಯು ಯಾವುದೆಂದರೆ ಭಾವನೆ ಅಥವಾ ಕಲ್ಪನಾ—ಅದೇ ಮಾಯೆಯು. ಅದು ಸತ್‌ಸ್ವರೂಪವನ್ನು ತಿಳಿಯಬಿಡದೆ ನಿಜತತ್ವವನ್ನು ಮರೆಮಾಡುವುದು. ಇದೇ ಜೀವನ ಕಾರಣದೇಹವು. ಹೀಗೆ ಸ್ವರೂಪವನ್ನು ತಿಳಿಯದೆ ಮಾಡಿದ ಕಲ್ಪನೆಯು ಸೂಕ್ಷ್ಮದೇಹವು; ಅದೇ ಕಲ್ಪನಾ ವೃತ್ತಿಯು.

ಮುಂದೆ ಏನೂ ತೋರದೆ ವಿಷಯುಭೋಗಕ್ಕೆ ಪಡೆದ ದೇಹವೇ ಸ್ಥೂಲದೇಹವು. ಈ ಮೂರು ದೇಹಗಳೂ ಆತ್ಮನಿಗೆ ಸಂಬಂಧವಿಲ್ಲದೆ, ಅಜ್ಞಾನ ನಿಮಿತ್ತ, ಕರ್ಮ ಮತ್ತು ಜನನಮರಣಗಳ ಬಾಧೆಯನ್ನು ಉಂಟುಮಾಡುವುವು. ಈ ಬಾಧೆಯನ್ನು ನಿವಾರಿಸಲಿಕ್ಕೆ ಮೂರು ದೇಹಗಳ ವಿವೇಚನೆ ಸರಿಯಾಗಿ ಮಾಡಿ, ಚಿತ್‌ರೂಪವಾದ ಜೀವನನ್ನೂ ಜಡ ಲೌಕಿಕ ದೇಹಾದಿಗಳಿಂದ ಪ್ರಥಕ್ಕರಿಸಿ ತನ್ನ ಸ್ವರೂಪವನ್ನು ತಿಳಿಯಬೇಕು. ಜೀವನ ಹೊರಗಿನ ದೇಹವೇ

## ಸ್ಥೂಲದೇಹವು.

ಇದು ಪ್ರಥ್ವಿ, ಆಪ್, ತೇಜ, ವಾಯು, ಆಕಾಶಗಳೆಂಬ ಪಂಚಭೂತಗಳಿಂದ ನಿರ್ಮಿಸಲ್ಪಟ್ಟು, ಇದರಲ್ಲಿ ಪ್ರಥ್ವಿಯ ಅಂಶ ಹೆಚ್ಚು ಇರುವುದರಿಂದ ಪಾರ್ಥಿವದೇಹ ಎಂದು ಕರೆಯಲ್ಪಡುವದು. ಸ್ಥೂಲದೇಹವು ಕೇವಲ ಕಾಷ್ಟವತ್ ಜಡವಾಗಿದ್ದು ಜೀವನು ಭೋಗಪಡೆಯುವ ಸ್ಥಾನವಾಗಿದ್ದು ಅವನ ಕಲೆಯಿಲ್ಲದಿದ್ದರೆ ಶವದಂತಿರುವದು. ಇದು ಹುಟ್ಟಿಬೆಳೆದು ವೃದ್ಧಿಹೊಂದಿ ಪ್ರಾಯವು ಹೆಚ್ಚುತ್ತಾ ರೋಗಾದಿಗಳಿಂದ ಪೀಡಿತವಾಗಿ ಕ್ಷೀಣವಾಗಿ ಸಾಯುವುದು.

ಈ ದೇಹವು ಪಂಚಭೂತಾತ್ಮಕವಾಗಿದ್ದು ಜಡವಾಗಿದೆ; ಮತ್ತು ಮೃಣ್ಮಯ ಘಟದಂತೆ ದೃಶ್ಯವಾಗಿದೆ. ಆತ್ಮನು ಚೈತನ್ಯಸ್ವರೂಪನಾಗಿ ದೃಷ್ಟಾ ಆಗಿದ್ದಾನೆ. ಅದಲ್ಲದೆ ದೇಹವು ಪಂಚಭೂತಾತ್ಮಕವಾದುದರಿಂದ ವಿಕಾರವನ್ನು ಹೊಂದುತ್ತದೆ, ಆತ್ಮನು ನಿರ್ವಿಕಾರನಾಗಿದ್ದಾನೆ. ದೇಹವು ಮಾಂಸಾದಿ ದುರ್ಗಂಧದಿಂದಲೂ, ಕ್ರಿಮಿಗಳಿಂದಲೂ ಮಲೀನವಾಗಿದೆ. ಆತ್ಮನು ಅಸಂಗನೂ, ಅಕ್ರಿಯನೂ, ನಿರ್ಮಲನೂ ಆಗಿದ್ದಾನೆ. ಈ ಸ್ಥೂಲ ದೇಹದ ವಿವೇಚನೆ ಸರಿಯಾಗಿ ತಿಳಿಯಲಿಕ್ಕೆ ಪಂಚೀಕರಣವಾದ ಇಪ್ಪತ್ತೈದು ತತ್ವಗಳ ವಿವರಣೆಯನ್ನು ಕೆಳಗೆ ತಿಳಿಸಿರುತ್ತದೆ. ಸ್ಥೂಲದೇಹಕ್ಕೆ ನೇತ್ರಸ್ಥಾನ, ಓಂಕಾರದ, ಅಕಾರಮಾತ್ರೆ, ವೈಖರೀವಾಚೆ, ಸ್ಥೂಲಭೋಗ.

| ಪೃಥ್ವೀತತ್ವ. | ಆಪತತ್ವ. | ತೇಜತತ್ವ. | ವಾಯುತತ್ವ | ಆಕಾಶತತ್ವ. |
|---|---|---|---|---|
| ಅಸ್ಥಿ. | ಶುಕ್ರ. | ಕ್ಷುಧಾ. | ಚಲನ. | ಕಾಮ. |
| ಮಾಂಸ. | ಶೋಣಿತ. | ತೃಷಾ. | ವಲನ. | ಕ್ರೋಧ |
| ತ್ವಚಾ. | ಲಾಳ. | ಆಲಸ್ಯ. | ಧಾವನ. | ಶೋಕ. |
| ನಾಡಿ. | ಮೂತ್ರ. | ನಿದ್ರಾ. | ಪ್ರಸಾರಣ. | ಮೋಹ. |
| ರೋಮ. | ಸ್ವೇದ. | ಕಾಂತಿ. | ಆಕುಂಚನ. | ಭಯ. |

ಹೀಗೆ ವಿಚಾರದಿಂದ ದೇಹವು ನಾನಲ್ಲ; ದೇಹವು ನಾನಲ್ಲವಾದ ಮೇಲೆ ದೇಹದಲ್ಲಿ ಕಲ್ಪಿತವಾದ ದೊಡ್ಡವನು, ಚಿಕವನು, ಉತ್ತಮನು,

ಕನಿಷ್ಟನು, ಬಾಲತ್ವ, ತರುಣತ್ವ, ವೃದ್ಧತ್ವ ಎಂಬ ಭೇದ ಭಾವಗಳೂ, ಬ್ರಾಹ್ಮಣ, ಶೂದ್ರ ಎಂಬ ವರ್ಣ ಭೇದಗಳೂ, ಶುದ್ಧಾಶುದ್ಧವೆಂಬ ಮಲೀನ ದೋಷಗಳೂ, ಹೋಗುವುದು, ಬರುವುದು ಎಂಬ ಕರ್ಮಗಳೂ, ನನಗಿಲ್ಲಾ. ಹೀಗಿದ್ದರೂ, ಪಂಚಭೂತ ದೇಹದಲ್ಲಿ ಅವಯವಗಳ ಕರ್ಮವೇ ತನಗೆ ಬರುತ್ತದೆಂಬ ಭ್ರಾಂತಿ ಬರುವುದು. ತನ್ನ ಈ (ಪಂಚಭೂತಾತ್ಮಕ) ದೇಹಕ್ಕೆ ಕೈ, ಕಾಲು, ಭುಜ, ಹೊಟ್ಟೆ ಎಂಬ ಅವಯವಗಳು ಸಾಧನಗಳಾಗಿ ಆತ್ಮನು ಈ ಸಾಧನಗಳಿಂದ ಭಿನ್ನನಾಗಿದ್ದಾನೆ. ಇದಕ್ಕೆ ದೃಷ್ಟಾಂತವು ಕಲ್ಲು, ಇಟ್ಟಿಗೆ, ತೊಲೆ ಮುಂತಾದ್ದರಿಂದ ಕಟ್ಟಿದ ಗ್ರಹವು ಮಾಲಿಕನಿಂದ ಪ್ರತ್ಯೇಕವು. ಹಾಗೆಯೇ ಸ್ಥೂಲರೂಪವಾದ ದೇಹವು ತನ್ನಿಂದ ಪ್ರತ್ಯೇಕವು. ಹೀಗೆ ಸ್ಥೂಲದೇಹವು ತಾನಲ್ಲ, ಮತ್ತು ತನ್ನದಲ್ಲ, ಅದು ಮಾತಾಪಿತೃಗಳ ಶುಕ್ಲ ಶೋಣಿತ ಮಲೀನ ರೇತದಿಂದ ಹುಟ್ಟಿ, ಆ ಭೂತಗುಣಗಳು ಸರಿಯಾಗಿ ಬಂದು, ಆಕಾರವನ್ನು ತಳೆದು, ನಾಶಹೊಂದುವ ದೇಹಕ್ಕೆ ತನ್ನದೆಂಬ ಮಾತು ಮಿಥ್ಯ. ಹೀಗೆ ಜಡದೃಶ್ಯವಾದ ಸ್ಥೂಲದೇಹವು ತಾನಲ್ಲ, ಮತ್ತು ಅದಕ್ಕೆ ಪ್ರಾಪ್ತವಾಗುವ ಕೃಷ್ಣ, ಧವಳ ವರ್ಣಗಳೂ, ಬೆಳೆಯುವುದು, ಕೃಶವಾಗುವುದು, ಎಂಬ ಧರ್ಮಗಳು ತನ್ನದಲ್ಲ. ಇದು ಕೇವಲ ಜಡವಾಗಿ ಸೂಕ್ಷ್ಮದೇಹದ ಧರ್ಮವಾಗಿದ್ದು ಅದರ ವಿವೇಚನೆ ಮಾಡಿದ್ದಲ್ಲಿ ಎಲ್ಲಾ ತಿಳಿಯುವುದು.

## ಸೂಕ್ಷ್ಮದೇಹ.

ಹ್ಯಾಗೆ ಒಬ್ಬ ಶ್ರೀಮಂತನು ದೊಡ್ಡ ಒಂದು ಮಹಡಿಯ ಮನೆಯನ್ನು ಕಟ್ಟಿ, ಅದರಲ್ಲಿ ಅವನಿಗೆ ಬೇಕಾದ ಆಹಾರ ಪಾನ ಮುಂತಾದ್ದನ್ನು ಒದಗಿಸಿಕೊಂಡು ದ್ರವ್ಯ ಸಂಚಯವನ್ನು ಯೋಗ್ಯ ಸ್ಥಳದಲ್ಲಿ ಇಡುತ್ತಾನೋ, ಹಾಗೆಯೇ ಹತ್ತೊಂಭತ್ತು ತತ್ವಗಳನ್ನು ಉಪಯೋಗಿಸುವ ಜೀವನು ಈ ಸ್ಥೂಲರೂಪ ಗ್ರಹದಲ್ಲಿ ಬಂದು ನಿಲ್ಲುತ್ತಾನೆ. ಇಲ್ಲಿ ಅವನಿಗೆ ಬೇಕಾದ ಪಂಚ ಜ್ಞಾನೇಂದ್ರಿಯ, ಪಂಚ ಕರ್ಮೇಂ

ದ್ರಿಯ, ಪಂಚಪ್ರಾಣ ಮತ್ತು ಮನ, ಬುದ್ಧಿ, ಚಿತ್ತ, ಅಹಂಕಾರ ಎಂಬ ಸಾಧನಗಳನ್ನು ತನ್ನ ಭೋಗಕ್ಕೋಸ್ಕರ ಇಂದ್ರಿಯ ಗೋಲಕದಲ್ಲಿ ಇಟ್ಟು ವ್ಯವಹಾರ ಮಾಡುತ್ತಿದ್ದಾನೆ. ಹೀಗೆ ಕರ್ಮದ ಉಪಭೋಗ ತೀರಿದ ಮೇಲೆ ಈ ತತ್ವಗಳನ್ನು ಸೂಕ್ಷ್ಮರೂಪದಲ್ಲಿ ಪರಲೋಕಕ್ಕೆ ತೆಗೆದುಕೊಂಡು ಹೋಗುತ್ತಿದ್ದಾನೆ. ಕೆಲವು ಜ್ಞಾನಿಗಳು ಈ ಹತ್ತೊಂಭತ್ತು ತತ್ವಗಳಿಗೆ ಅಂತಃಕರಣ ಮತ್ತು ಪಂಚ ವಿಷಯುಗಳನ್ನು ಸಹ ಸೇರಿಸಿ ಸೂಕ್ಷ್ಮದೇಹದಲ್ಲಿ ಪಂಚವಿಂಶತಿ ತತ್ವಗಳನ್ನೂ ಗಣನೆಮಾಡುತ್ತಾರೆ. ಈ ಇಪ್ಪತ್ತೈದು ತತ್ವಗಳು ಪೃಥ್ವಿ, ಆಪ, ತೇಜ, ವಾಯು, ಆಕಾಶ ಎಂಬ ಐದು ತತ್ವಗಳ ಅಪಂಚೀಕೃತ ಭಾಗದಿಂದ ಹುಟ್ಟಿ ನಮಗೆ ಇವುಗಳ ಅನುಭವವು ಅಂತರಾಕಾಶದಲ್ಲಿ ಆಗುವುದು.

ಹೀಗೆ ಪಂಚತತ್ವಗಳ ಸತ್ವಭಾಗದಿಂದ ಅಂತಃಕರಣ ಪಂಚಕ ಮತ್ತು ಜ್ಞಾನೇಂದ್ರಿಯ ಪಂಚಕವೂ, ರಜೋಗುಣದಿಂದ ಪ್ರಾಣಪಂಚಕ ಮತ್ತು ಕರ್ಮೇಂದ್ರಿಯ ಪಂಚಕವೂ ಮತ್ತು ತಮೋಗುಣದಿಂದ ವಿಷಯ ಪಂಚಕವೂ ಉತ್ಪನ್ನವಾಗಿರುತ್ತವೆ. ಹೀಗೇ ಇಪ್ಪತ್ತೈದು ತತ್ವಗಳು ಪಂಚ ಭೂತಗಳ ಕಾರ್ಯವಾಗಿದ್ದು ಆತ್ಮನು ಇವಕ್ಕೆಲ್ಲವು ಸಾಕ್ಷಿಯೆಂತ ತಿಳಿಯಬೇಕು.

ಆ ತತ್ವಗಳ ವಿವರ ಕೆಳಗಿನ ಕೋಷ್ಟಕದಿಂದ ತಿಳಿಯಬಹುದು.

| ಭೂತಗಳು | ಸತ್ವಗುಣ. | | ರಜೋಗುಣ. | | ತಮೋಗುಣ. |
|---|---|---|---|---|---|
| | ಅಂತಃಕರಣ ಪಂಚಕ | ಜ್ಞಾನೇಂದ್ರಿಯ ಪಂಚಕ | ಪ್ರಾಣ ಪಂಚಕ | ಕರ್ಮೇಂದ್ರಿಯ ಪಂಚಕ | ವಿಷಯ ಪಂಚಕ |
| ಆಕಾಶ | ಅಂತಃಕರಣ | ಶ್ರೋತ್ರ | ವ್ಯಾನ | ವಾಕ್ | ಶಬ್ದ |
| ವಾಯು | ಮನ | ತ್ವಚಾ | ಸಮಾನ | ಪಾಣಿ | ಸ್ಪರ್ಶ |
| ತೇಜ | ಬುದ್ಧಿ | ಚಕ್ಷು | ಉದಾನ | ಪಾದ | ರೂಪ |
| ಆಪ | ಚಿತ್ತ | ಜಿಹ್ವಾ | ಪ್ರಾಣ | ಶಿಶ್ನ | ರಸ |
| ಪೃಥ್ವಿ | ಅಹಂಕಾರ | ಘ್ರಾಣ | ಅಪಾನ | ಗುದ | ಗಂಧ |

ಈ 25 ತತ್ವಗಳ ಸಂಘಾತವು ಜೀವನ ಸೂಕ್ಷ್ಮದೇಹವಾಗಿ, ಕರ್ತೃತ್ವ ಭೋಕ್ತೃತ್ವ ಅಹಂಕಾರದಿಂದ ಕರ್ಮಬಂಧನೆಯೂ ಉಂಟಾಗಿ, ಜೀವನನ್ನು ಬದ್ಧಮಾಡುತ್ತದೆ. ಈಗ ಇದರಲ್ಲಿ ಕರ್ತೃ ಯಾರು ಭೋಕ್ತೃ ಯಾರು, ಕರ್ತೃ ಭೋಕ್ತೃಗಳ ವಾಹನ ಯಾವುದು, ವಿಷಯಗಳನ್ನು ಪಡೆಯುವ ದ್ವಾರ ಯಾವದು ಎಂದು ತಿಳಿದ ಮೇಲೆ ಜೀವನು ಅಸಂಗತ್ವವನ್ನು ಪಡೆದು ಮುಕ್ತನಾಗುತ್ತಾನೆ. ಈ ದೇಹದಲ್ಲಿ ಅಂತಃಕರಣ ಪಂಚಕವೇ ಕರ್ತೃವು, ಭೋಕ್ತೃವು ಆಗಿರುವದು. ಪಂಚಪ್ರಾಣಗಳೇ ಈ ಅಂತಃಕರಣ ವೃತ್ತಿವಾಹನಗಳಾಗಿ, ಪಂಚಜ್ಞಾನೇಂದ್ರಿಯಗಳು ಆ ವೃತ್ತಿ ಹೊರಗೆ ಬರುವ ದ್ವಾರಗಳಾಗಿ, ವಿಷಯಗಳು ಭೋಗವಾಗಿರುವುವು. ಹೀಗೆ ಮನಸ್ಸು, ಬುದ್ಧಿ, ಚಿತ್ತ, ಅಹಂಕಾರವು ಕರ್ತೃವು ಆಗಿ, ಪ್ರಾಣಗಳ ಸಹಾಯದಿಂದ ಇಂದ್ರಿಯ ದ್ವಾರದಲ್ಲಿ ಭೋಗವನ್ನು ಸ್ವೀಕರಿಸುವುದು. ವೃತ್ತಿಯ ಚಲನೆಯು ನನಗೆ ತಿಳಿದು, ನಾನು ಆತ್ಮನು ಅಸಂಗನು, ಅಕ್ರಿಯನಾಗಿ, ಅಬಂಧ, ಅಮರಣನಾಗಿ, ಬಂಧನ ಮತ್ತು ಅದರಿಂದ ಉಂಟಾಗುವ ಪಾಪಪುಣ್ಯದಿಂದ ದೂರನಾಗಿ ಸ್ವತಂತ್ರನಾಗಿದ್ದೇನೆ. ಹೀಗೆ ಪಂಚತತ್ವಗಳ ಕಾರ್ಯವಾದ ಈ ಸೂಕ್ಷ್ಮ ದೇಹವು ತನಗೆ ದೃಶ್ಯವಾಗಿದ್ದು, ತಾನು ಆ ವೃತ್ತಿಯ ಚಲನೆಗೆ ದೃಷ್ಟಾ, ಸಾಕ್ಷಿಯಾಗಿರುವೆನು. ಆ ವೃತ್ತಿಗಳು ಚಲಿಸಿದರೂ ಚಲನೆಯಾಗದೆ ಇದ್ದರೂ, ತನಗೆ ಅದರ ಸುಖದುಃಖ ಭಾದೆ ಇಲ್ಲ. ಕಾರಣ, ಕರ್ತೃತ್ವವು ಅಹಂಕಾರದ ಧರ್ಮವು; ಚಲನೆಯಾದರೋ ಇಂದ್ರಿಯ ಪ್ರಾಣಗಳ ಧರ್ಮವಾಗಿ, ತಾನು ಅಸಂಗ ಅಕ್ರಿಯ ಅಮರಣ ಚಿತ್ ಆನಂದರೂಪನಾಗಿರುವೆನು.

## ಕಾರಣದೇಹ.

ಸ್ಥೂಲ, ಸೂಕ್ಷ್ಮ ಈ ಎರಡು ದೇಹಗಳಿಂದ ಆತ್ಮಭಿನ್ನನೆಂದು ವಿವರಿಸೋಣಾಯಿತು. ಇನ್ನು ಮೂರನೇ ಕಾರಣ ದೇಹದಿಂದ ಭಿನ್ನನಾಗಿರುವ ವಿಷಯವನ್ನು ಹೇಳುತ್ತಿದ್ದೇನೆ. ಜಾಗ್ರದವಸ್ಥೆಯಲ್ಲಿ ಯಾವ ವಿಷಯ

ಗಳನ್ನು ನೋಡುವೆವೋ ಅಥವಾ ಕೇಳುವೆವೋ, ಅದರ ಸಂಸ್ಕಾರಗಳು ಸೂಕ್ಷ್ಮರೂಪ ಅಂತಃಕರಣದಲ್ಲಿ ನೆಲಸಿದ್ದು ಅದರ ಯೋಗದಿಂದ ಕಂಡಿ ತೆಂದರೆ, ಮನೆ, ಉಗಿಭಂಡಿ ಕಳತ್ರ ಪುತ್ರ, ದ್ರವ್ಯ, ಸುಖದುಃಖ ಮೊದ ಲಾದ ಪ್ರಪಂಚವು ಕಂಡುಬರುವದು. ಈ ವಿಷಯಗಳೆಲ್ಲಾ ಸತ್ಯವಾಗಿರದೇ ಭಾಸರೂಪವಾಗಿರುವವು. ಹಾಗೆಯೇ ಜಾಗ್ರತಾವಸ್ಥೆಯಲ್ಲಿ ತೋರುವ ನಕ್ಷತ್ರ ಚಂದ್ರಸೂರ್ಯ ಮುಂತಾದವುಗಳು ಧ್ಯಾನಕಾಲದಲ್ಲಿ ತೋರು ವದು. ಈ ವಸ್ತುಗಳು ಸಂಕಲ್ಪ ರೂಪವಾಗಿ ಎಲ್ಲಾ ವಿಷಯಗಳು ಸೂಕ್ಷ್ಮ ರೂಪವಾಗಿದ್ದರಿಂದ ಇದರಲ್ಲಿ ಜೀವನು ಸೂಕ್ಷ್ಮ ದೇಹವನ್ನು ವಹಿಸಿ ಸ್ವಪ್ನಾವಸ್ಥೆಯನ್ನು ಹೊಂದುವನು. ಇದು ನಮಗೆ ತಿಳಿದಿರು ವುದರಿಂದ ಈ ಸ್ವಪ್ನಾವಸ್ಥೆಯು ನಮ್ಮದಲ್ಲವಾಗಿ ಅದು ಸೂಕ್ಷ್ಮ ದೇಹ ದ್ದಾಗಿ ತಾನು ಅದರ ಸಾಕ್ಷಿಯಾಗಿರುವೆನು. ಈ ಸ್ವಪ್ನಾವಸ್ಥೆಯಲ್ಲಿ ಜೀವನು ಜಾಗ್ರದಾವಸ್ಥೆಯ ನೇತ್ರಸ್ಥಾನವನ್ನು ಬಿಟ್ಟು, ತನಗೆ ಸಂಬಂಧಿ ಸಿದ ೨೫ ಕಲೆಗಳನ್ನು ತೆಕ್ಕೊಂಡು ಹಿತಾ ಎಂಬ ನಾಡಿಯಲ್ಲಿ ಸಂಸ್ಕಾರ ರೂಪ ಭೋಗವನ್ನು ಅನುಭವಿಸುತ್ತಿದ್ದಾನೆ. ಈ ಅವಸ್ಥೆಯಲ್ಲಿ ಉಕಾರ ಮಾತ್ರೆ, ಪ್ರವಿವಿಕ್ತ ಅಥವಾ ವಾಸನಾಭೋಗ, ಮತ್ತು ಮಧ್ಯಮ ವಾಚಾ. ಇದರಲ್ಲಿ ಪುರುಷನು ಉಚ್ಚನೀಚ ಭಾವಗಳನ್ನು ತಳೆದು, ವಿಷಯಭೋಗ ಪಡದು ವಾಸನಾರೂಪದಿಂದ ರಮಿಸಿ, ಶ್ರಮಿಯಾದ ಜೀವನು ತನ್ನ ಎಲ್ಲಾ ಕರಣಗಳನ್ನು ಲೀನಮಾಡಿ ಹೃದಯದಲ್ಲಿ ಪ್ರವೇಶಿ ಸುವನು. ಈ ಲೀನಾವಸ್ಥೆಯಲ್ಲಿ ಇಂದ್ರಿಯಗಳು ಮನ, ಬುದ್ಧಿ, ಚಿತ್ತ, ಅಹಂಕಾರವು ಮತ್ತು ವಿಷಯಗಳೂ ಇಲ್ಲವು. ಆದರೆ ವಿಷಯಾ ಸಕ್ತಿಯನ್ನು ಹೊಂದಿದ ಜೀವನು, ಮಾಯಾಪ್ರಪಂಚವು ಲೀನವಾದ ಸ್ಥಿತಿ ಯಲ್ಲಿ, ತನ್ನ ಸತ್‌ಸ್ವರೂಪವನ್ನು ಸ್ಮರಿಸದೆ ಅಜ್ಞಾನವನ್ನೇ ವಿಷಯವನ್ನಾಗಿ ಮಾಡಿ ಭೋಗಿಸುವನು. ಇದೇ ಸುಷುಪ್ತಾವಸ್ಥೆ, ಕಾರಣ ದೇಹ, ಅಜ್ಞಾನ ಅವಸ್ಥೆ, ಆನಂದಭೋಗ, ಪಶ್ಯಂತೀವಾಚೆ, ಮಕಾರ ಮಾತ್ರೆ. ಈ ಅವಸ್ಥೆಯಲ್ಲಿ ಜಗತ್ತಿನ ಕಾರಣವಾದ ಸಂಸ್ಕಾರ ರೂಪಗಳು ನಾಶ ವಾಗದೆ ಲೀನವಾಗಿ, ಸ್ಥೂಲ ಸೂಕ್ಷ್ಮದೇಹಗಳಿಗೆ ಕಾರಣವಾದದರಿಂದ

ಇದಕ್ಕೆ ಕಾರಣದೇಹವೆಂದು ಹೇಳುತ್ತಾರೆ. ಮುಂದೆ ಸ್ವಲ್ಪ ಆನಂದ ವನ್ನು ಅನುಭವಿಸಿ ಜೀವನು ಪುನಃ ಸಂಸಾರಯಾತನೆಯನ್ನು ಪಡಿಯಲಿಕ್ಕೆ ಜಾಗ್ರತಾವಸ್ಥೆಯನ್ನು ಹೊಂದುವನು. ಹೀಗೆ ಸಂಸ್ಕಾರಗಳು ಲೀನವಾಗಿ ಅಖಂಡ ಸ್ವರೂಪವೇ ಇರಲು, ಸುಮ್ಮನೆ ಅಜ್ಞಾನದಲ್ಲಿ ಬೀಳುತ್ತ, ಸರ್ವ ವೃತ್ತಿಯೂ, ಇಂದ್ರಿಯಗಳೂ, ಲೀನವಾದ ಸ್ಥಿತಿಯು ತನಗೆ ತಿಳಿದು ಅದರ ಅನುಭವವನ್ನು ಜೀವನು ಜಾಗ್ರತೆಯಲ್ಲಿ ಹೇಳುತ್ತಿದ್ದಾನೆ. ತಾನು ಆ ಅಜ್ಞಾನದ ದೃಷ್ಟಾ ಆಗಿ, ಕಾರಣದೇಹವು ತನ್ನಿಂದ ಭಿನ್ನವಾಗಿದೆ. ಹೀಗೆ ಪೂರ್ಣಜ್ಞಾನವಾಗಿ, ಸ್ವರೂಪ ಸ್ಥಿತಿಯನ್ನು ತಿಳಿದು, ಆನಂದವನ್ನು ಹೊಂದ ಬೇಕಾದರೆ ಎಲ್ಲಾ ವೃತ್ತಿಗಳನ್ನು ಪ್ರಯತ್ನದಿಂದಲೇ ಲೀನಮಾಡಿ, ಶೂನ್ಯಸ್ಥಿತಿ ಯನ್ನು ಹೊಂದದೆ, ಜ್ಞಾನರೂಪವನ್ನು ದೃಢವಾಗಿ ಇಟ್ಟುಕೊಳ್ಳಬೇಕು. ಹೀಗೆ ಮೂರು ದೇಹಗಳಿಗೂ, ಮೂರು ಅವಸ್ಥೆಗಳಿಗೂ, ತಾನು ಆತ್ಮನು ದೃಷ್ಟಾ ಎಂತ ವಿವೇಚನೆ ಮಾಡಿ ಅಜ್ಞಾನಕಾರ್ಯವಾದ ದೇಹಭಾವವನ್ನು ಬಿಟ್ಟುಬಿಡಬೇಕು. ಈ ದೇಹಭಾವದಿಂದಲೇ ನಾಮರೂಪ ಭೇದ ಮತ್ತು ಕಲ್ಪನಾರೂಪ ವಿಷಯಗಳಲ್ಲಿ ವಾಸನೆ ಉಂಟಾಗಿ ನಿಜಸ್ವರೂಪವು ಮರೆ ಯಾಗುವದು. ಆದುದರಿಂದ ಈ ನಾಮರೂಪ ಪ್ರಪಂಚವು ಹೋಗಿ ನಿಜ ಸ್ಥಿತಿಯನ್ನು ತಿಳಿಯಲಿಕ್ಕೆ ಯೋಗ್ಯ ಗುರುವಿನ ಕೂಡೆ ಶ್ರವಣ, ಮನನ, ನಿದಿಧ್ಯಾಸ ನಡೆಸಿ, ಉಪದೇಶ ಪಡೆದಲ್ಲಿ ಎಲ್ಲಾ ಅಜ್ಞಾನವು ನಿವೃತ್ತಿಯಾಗಿ ದೇಹಧ್ಯಾಸವು ಅಳಿಯುವದು. ಈ ಜ್ಞಾನವು ಪಡೆಯಲಿಕ್ಕೆ ಮುಮು ಕ್ಷುವು ಸಾಧನದ್ವಾರಾ ಚಿತ್ತಶುದ್ಧಿ ಮಾಡಿದಲ್ಲಿ, ಯೋಗ್ಯ ಗುರುವು ಬೇಗನೇ ಸಿಕ್ಕಿ ಸುಲಭರೀತಿಯಿಂದ ಅಜ್ಞಾನರೂಪ ಕಾರಣದೇಹವನ್ನೂ, ಕಾರ್ಯರೂಪ ಸ್ಥೂಲ ಸೂಕ್ಷ್ಮ ದೇಹಗಳ ಭಾವನೆಯನ್ನು ನಿವೃತ್ತಿಮಾಡಿ, ತನ್ನ ಆನಂದಸ್ವರೂಪವನ್ನು ತೋರಿಸಿಕೊಡುವನು. ಹೀಗೆ ಅನೇಕ ಜನ್ಮ ಗಳಿಂದ ಆನಂದಸಲುವಾಗಿ ತೊಳಲಿದ ಸಾಧಕನಿಗೆ ಗುರುವು ದೊರಕಿದ ಕೂಡಲೇ, ಶಿಷ್ಯನ ಭಾವನಾವೃತ್ತಿಯನ್ನು ತನ್ನ ಜ್ಞಾನದೃಷ್ಟಿಯಿಂದ ಲೀನ ಮಾಡಿ, ಯಾವಾಗಲೂ ಉದಿತವಾಗಿರುವ ಅಖಂಡಾನಂದ ಸ್ವರೂಪವನ್ನು ತೋರಿಸಿಕೊಡುವನು. ಈ ನಿಜ ಸ್ವರೂಪವು ನಮ್ಮ ಹತ್ತಿರಲೇ ಇದ್ದು,

ನಮ್ಮ ದೃಷ್ಟಿಯಾದರೋ ವಿಷಯುಗಳ ಪ್ರೀತಿಯಿಂದ ದೇವರ ಕಡೆಗೆ ಬೆನ್ನು ಮಾಡಿ ಇರುವದರಿಂದ, ಪ್ರಪಂಚದ ವಿಷಯುಗಳೇ ತೋರಿಬರುವವು. ಈಗ ಸ್ವರೂಪವನ್ನು ತಿಳಿಯಬೇಕೆಂದು ಇಚ್ಛಿಸುವವನು ಅನೇಕ ರೂಪ ಸೃಷ್ಟಿ ಕಡೆಗೆ ನೋಡದೆ, ಎಲ್ಲಾ ವಸ್ತುಗಳಿಗೂ ಆದಿಷ್ಠಾನವಾದ ತನ್ನ ಸ್ವರೂಪದ ಕಡೆಗೆ ನೋಡಲಿಕ್ಕೆ ಪ್ರಯತ್ನವನ್ನು ಮಾಡಬೇಕು. ಒಂದು ದೀಪವನ್ನು ಹತ್ತಿಸಿ ಅದರ ಸುತ್ತಲೂ ಕಪ್ಪು, ಕೆಂಪು, ಬಿಳಿ ವರ್ಣದ ಕನ್ನಡಿಗಳು ಇಟ್ಟರೆ ಪ್ರಕಾಶವು ವಿಕಾರರೂಪವಾಗಿ ತೋರುವದು. ಹಾಗೆಯೇ ಚಿತ್ ಸ್ವರೂಪವು ಮೂರು ದೇಹ ರೂಪ ಉಪಾಧಿಗಳಿಂದ ಜಡವಾಗಿ ಘನೀಭೂತವಾಗಿ ತೋರುವದು.

ಹೊರಗಿನ ದೃಷ್ಟಿಯಿಂದ ಅನೇಕತ್ವವು ತೋರುವದು. ವಿಚಾರದೃಷ್ಟಿಯಿಂದ ನೋಡಿದಲ್ಲಿ ಆಕಾಶ ತತ್ವದಲ್ಲಿಯೇ ಆಕಾಶರೂಪವಾದ ತಾನು ಆಕಾಶರೂಪ ವಿಷಯುಗಳನ್ನು ಗ್ರಹಣಮಾಡುವೆನು. ಈ ಹೊರಗಿನ ಲಕ್ಷದಿಂದಲೇ ಅನೇಕತ್ವವು ಭಾಸವಾಗಿ ಸತ್‌ರೂಪವು ಅಡಗುವದರಿಂದ ಸ್ವರೂಪದ ಕಡೆಗೆ ಲಕ್ಷವನ್ನಿಡಬೇಕು, ಮತ್ತು ಸ್ಥೂಲದ ವಿಷಯ ವಿಚಾರವನ್ನು ಮಾಡಬೇಕು. ದೇಹವು ಜಡದೇಹವು ಹೋಗುತ್ತದೆ, ಬರುತ್ತದೆ. ನಾನು ದೃಷ್ಟಾ, ಚೈತನ್ಯ ಹೀಗೆ ಹಸ್ತಪಾದ, ಹೊಟ್ಟೆ ಎಂಬ ಸ್ಥೂಲದ ಭಾವವನ್ನು ಬಿಟ್ಟು, ಒಳಗೆ ನೋಡಬೇಕು. ಅಲ್ಲಿ ಮನಸ್ಸಿನ ಚಲನ ವಲನವು ತಿಳಿಯುತ್ತದೆ. ಈ ಮನಸ್ಸಿನ ಚಲನತ್ವವು ಎಲ್ಲಾ ನಾಮರೂಪಗಳನ್ನು ರಚಿಸಿ ಭ್ರಮೆಯಲ್ಲಿ ಹಾಕುತ್ತದೆ. ಆದುದರಿಂದ ಆ ನಾಮರೂಪದಲ್ಲಿ ಮಗ್ನನಾಗದೇ ಸುಮ್ಮನೇ ವೃತ್ತಿ ಕಡೆಗೆ ನೋಡಬೇಕು.

ಹೀಗೆ ನೋಡಿ ಮನೋರೂಪ ಉಪಾಧಿಯ ಸಮ್ಮಂಧವನ್ನು ಬಿಡಿಸಿ, ಸುಮ್ಮನೆ ಸಾಕ್ಷಿರೂಪ ಸ್ಥಿತಿಯಲ್ಲಿರಬೇಕು. ಈ ಅನುಸಂಧಾನದ ಅಭ್ಯಾಸದಲ್ಲಿ ಮನಸ್ಸಿನ ಸಂಸ್ಕಾರವು ಬರಲು ಆ ಸಂಸ್ಕಾರದ ಕಡೆಗೆ ನೋಡಬಾರದು. ಯಾಕಂದರೆ, ತನ್ನ ಉದ್ದಿಶ್ಯವಾದರೂ ಸ್ವರೂಪವನ್ನು ನೋಡುವದು. ಹೀಗೆ ಸಂಸ್ಕಾರಗಳು ಹುಟ್ಟಿದರೆ ಚಿತ್‌ಪ್ರಕಾಶದಲ್ಲಿ ಲೀನ

ಮಾಡಲಿಕ್ಕೆ ಬಿಡಬೇಕು. ಸಂಸ್ಕಾರಗಳು ತೋಂದರೆ ಕೊಟ್ಟರೂ ಅದನ್ನು ತಿರಸ್ಕಾರ ಮಾಡಿ ಲಯಮಾಡುವ ಪ್ರಯತ್ನದಲ್ಲಿರಬಾರದು. ಹೀಗೆ ಸ್ವರೂಪದಲ್ಲಿ ಆಗುವಂಥಾ ಹಂಸರೂಪ ಆತ್ಮನನ್ನು ನೋಡುತ್ತಾ ಇರಬೇಕು.

### (ಆತ್ಮಾನುಸಂಧಾನ)

ಹೀಗೆ ಕಾರ್ಯಪ್ರಯತ್ನ ಭಾವವನ್ನು ಬಿಟ್ಟು ಲಕ್ಷ್ಯ ಇಟ್ಟಲ್ಲಿ ಇಂದ್ರಿಯಗಳು ಬುದ್ಧಿವೃತ್ತಿಯಲ್ಲಿ ಲೀನವಾಗುವವು. ವಿಷಯಗಳು ನಿಂತು ಹೋಗಿ ಬುದ್ಧಿಯು ಸಹಾ ಲೀನವಾಗಿ ಕೇವಲ ಸತ್‌ಸ್ಫುರಣ ಉಳಿದು, ಬುದ್ಧಿಯು ಸಹ ಏಕಾಗ್ರತಾವಸ್ಥೆಯನ್ನು ಹೊಂದಿ ಅಂತಃಕರಣದಲ್ಲಿ ಲೀನತ್ವ ಹೊಂದಿ, ಚಿತ್‌ರೂಪ ಮಾತ್ರ ಒಂದು ತಿಳಿಯುವದು. ಅದಲ್ಲದೆ ವಾಯುವಿನ ಗತಿಯು ಸಹಾ ಕಮ್ಮಿಯಾಗಿ ಮಂದವಾಗಿ ಬುದ್ಧಿಯು ತೇಜೋಮಯವಾಗಿ ಸ್ವರೂಪವು ಉದಯವಾಗುವುದು.

ಈ ಜ್ಞಾನಬೋಧೆಯನ್ನು ಆತ್ಮಜ್ಞಾನಿಯಾದ ಗುರುವಿನ ಮೂಲಕ ಸ್ವರೂಪದ ಸ್ಥಿತಿಯನ್ನು ತಿಳಿಯಬೇಕು. ಕಾರಣ, ಸ್ವಾನುಭಾವವಿಲ್ಲದ ಗುರು ವಿನಹ ಸ್ವತಃ ಪ್ರಯತ್ನದಿಂದ ವೃತ್ತಿಯನ್ನು ನಿರೋಧಿಸಿದ್ದಲ್ಲಿ, ಕಲ್ಪನಾವೃತ್ತಿಯು ಸಂತಾಪ ಹೊಂದಿ, ಯಾವದಾದರೂ ವಿಪರೀತ ಕಲ್ಪನೆಯಲ್ಲಿ ಬಿದ್ದು, ಯಾವದಾದರೂ ಅನಾಹುತ ಕಲ್ಪನೆಯನ್ನು ತೆಕ್ಕೊಂಡು ಮನಸ್ಸನ್ನು ಮರುಳು ಮಾಡಬಹುದು. ಆದಕಾರಣ, ಯೋಗ್ಯ ಗುರುವಿನಿಂದ ಉಪದೇಶ ಪಡೆದಲ್ಲಿ ವೃತ್ತಿಯು ಲೀನಹೊಂದಿ, ಚೈತನ್ಯರೂಪ ಹೊಂದುವದು. ಅಥವಾ ಮುಂಚಿನ ಕರ್ಮವಿಪಾಕವಿದ್ದಲ್ಲಿ ಅಂತಃಕರಣದ ಸತ್ ರೂಪ ಸ್ಫುರಣ ಮಾತ್ರ ನಿಲ್ಲುವದು. ಈ ಜ್ಞಾನಬೋಧೆ ಆದನಂತರ ತನ್ನ ಚಿತ್ ರೂಪವು ತಿಳಿದದ್ದರಿಂದ ಅಖಂಡ ಆನಂದವು ತಲೆದೋರಿ ಎಲ್ಲಾ ಸುಖಸಾಮ್ರಾಜಕ್ಕೂ ಅರ್ಹನಾಗುವನು. ಆದರೂ ಮುಂಚಿನ ಸಂಸ್ಕಾರದ ಅನುಭವವು ವೃತ್ತಿಗೆ ಬಿಂಬಿಸಿದ್ದುದರಿಂದ ಅದು ಮುಂದೆ ಮೋಹಪಡದಂತೆ ವಿವೇಕಾಭ್ಯಾಸವನ್ನು ಯಾವಾಗಲೂ ನಡೆಸುತ್ತಾ ಇರಬೇಕು. ಹ್ಯಾಗಂದರೆ, ಅರಸನು ಒಂದು ದೇಶವನ್ನು

ಗೆದ್ದಮೇಲೆ ಅಲ್ಲಿ ತಂಟೆಯಾಗದ ಹಾಗೆ ತನ್ನ ಶಿಪಾಯಿಗಳನ್ನು ಹ್ಯಾಗೆ ನಿಲ್ಲಿಸುತ್ತಾನೋ, ಹಾಗೆಯೇ ತನ್ನ ಸ್ವರೂಪವು ತಿಳಿದರೂ ಮೇಲೆ ಹಾನಿ ಬಾರದ ಹಾಗೆ ವಿಚಾರರೂಪ ಶಿಬಂದಿಯನ್ನು ಜಾಗ್ರತೆಯಲ್ಲಿಡಬೇಕು. ಈ ರೀತಿಯಲ್ಲಿ ಸಾಧಕರು ಜಾಗರೂಕತೆಯಿಂದ ಪಂಚಭೂತ ರೂಪಕ ಗಳಾದ ಈ ಸೃಷ್ಟಿ ವಿಷಯಗಳನ್ನು ನೋಡಿ, ಅವು ಸೇವಿಸತಕ್ಕ ವಿಷಯ ವೆಂತ ಎಣಿಸದೆ ಅವುಗಳಲ್ಲಿರುವ ಚಿತ್ ರೂಪದ ಕಡೆಗೆ ಲಕ್ಷವನ್ನಿಡಬೇಕು. ಸಾಧಕನು ಅಭ್ಯಾಸ ಮಾಡುವಾಗ್ಯೆ ಮುಂಚಿನ ತನ್ನ ವಿಷಯ ಸಂಸ್ಕಾರ ಗಳು ಬಂದಲ್ಲಿ ಅವು ನನಗೆ ಕೆಳಗೆ ತಳ್ಳಲು ಬರುವವೆಂದು ವಿಚಾರಿಸಿ ಅವುಗಳನ್ನು ದೃಷ್ಟಿಸದೆ ಆದಿಷ್ಠಾನದ ಕಡೆಗೆ ಲಕ್ಷವಿಡಬೇಕು. ತನಗೆ ವ್ಯವ ಹಾರದ ಕೆಲಸವೇನೂ ಬಂದರೆ, ಸಾಧಕನು ಅಮಿಥ್ಯಾ ದುಃಖರೂಪವಾದ ಪ್ರಪಂಚವನ್ನು ನಡೆಸಬೇಕೋ ಎಂಬ ಶಂಕೆ ಬರಬಹುದು. ಪ್ರಪಂಚವು ದುಃಖರೂಪವಾಗಿರದೆ ಅದರಲ್ಲಿ ನಾವು ನಡೆಸುವ ಭಾವನಾಪ್ರಪಂಚವು ನಮ್ಮ ದುಃಖಕ್ಕೆ ಕಾರಣವಾಗಿರುವುದು. ಆದ್ದರಿಂದ ಅನೇಕ ಜೀವಿಗಳು ಅವರ ಅನೇಕ ಘಾತುಕ ಕಾರ್ಯಗಳೂ, ನೋಡಿದಪಕ್ಷದಲ್ಲಿ ಇವೆಲ್ಲವೂ ವಿವೇಕದೃಷ್ಟಿಯಿಂದ ಚಿತ್ ಸ್ವರೂಪವೇ ಎಂದೆಣಿಸಬೇಕು. ವ್ಯವಹಾರ ಸೃಷ್ಟಿಯು ನಮ್ಮ ಅಭ್ಯಾಸವು ದೃಢವಾಗಿ ನಿಲ್ಲಲಿಕ್ಕೆ ಒಂದು ಶಾಲೆಯು. ಆದುದರಿಂದ ಎಂಥಾ ಕಷ್ಟಗಳು ಬಂದರೂ ಎದೆಗುಂದದೆ ಸಮದೃಷ್ಟಿಯ ನ್ನಿಟ್ಟು ಆತ್ಮ ಉತ್ಕರ್ಷತೆಯ ಮಾರ್ಗವನ್ನು ನೋಡಬೇಕು. ಇಹಲೋಕ ದಲ್ಲಿ ಕರ್ಮದ ನಿಮಿತ್ತ ಬೇರೆಬೇರೆ ಕರ್ತವ್ಯಗಳು ನಮಗೆ ಬರುವುವು. ಇವು ಗಳನ್ನೆಲ್ಲಾ ನಾಟಕದ ಪಾತ್ರಗಳು ಕಾರ್ಯದಲ್ಲಿ ಆಸಕ್ತಿಯನ್ನಿಡದೇ ಎಲ್ಲಾ ಪ್ರಪಂಚವು ಚಿತ್ ಆಕಾಶರೂಪವು ಎಂಬ ಭಾವನೆಯಿಂದ ಸರಿ ಯಾಗಿ ನಡೆಸಬೇಕು. ಹೀಗೆ ಲೋಕದಲ್ಲಿ ಅನೇಕ ತತ್ವವು ತೋರಿದರೂ ಅದು ಸತ್ಯವೆಂದೆಣಿಸದೆ, ಸತ್ ರೂಪದ ಅನುಸಂಧಾನ ಮಾಡಿದಲ್ಲಿ ದ್ವೈತ ಭಾವನೆ ಕ್ರಮೇಣ ಅಳಿದು ಎಲ್ಲವೂ ಆನಂದರೂಪವಾಗಿ ತೋರುವುದು. ಹೀಗೆ ಸಾಧನಾಭ್ಯಾಸವನ್ನು ಧೃಢವಾಗಿ ನಡೆಸಿದ್ದಲ್ಲಿ ಅಜ್ಞಾನದಿಂದ ಉಂಟಾ ಗುವ ದ್ವೈತಭ್ರಮೆಯು ಹೋಗಿ, ಸಮಚಿತ್ತತೆಯಿಂದ ಎಲ್ಲಾ ಶಕ್ತಿಗಳೂ ನಮ್ಮಲ್ಲಿ ಬಂದು ಅಸಾಧಾರಣ ಕೆಲಸವನ್ನು ನಡಿಸಲಿಕ್ಕೆ ಶಕ್ಯವಾಗುವೆವು.

## (ಜ್ಞಾನಾಭ್ಯಾಸದ ಫಲ)

ಪ್ರಪಂಚದಲ್ಲಿ ಅನೇಕ ವಿಷಯಾಸಕ್ತರಾಗಿರಲು ಅವರಿಗೆ ಬಂದ ದುಃಖವನ್ನು ನೋಡಿ, ಪಾಪಕರ್ಮವನ್ನು ಹೇಸಿ, ನಿಜತ್ವವನ್ನು ತಿಳಿಯಬಡಿಸಬೇಕೆಂಬ ಲವಲವಿಕೆ ಇರುವವರೇ ಸಾಧಕರು. ಇವರು ಮುಂಚೆ ಹಿಂದುಸ್ಥಾನದಲ್ಲಿ ಅಸಂಖ್ಯರಾಗಿದ್ದರು. ನಿಜ ಧರ್ಮಬುದ್ಧಿಯಿಂದಲೂ ಆತ್ಮನಲ್ಲಿ ಇಟ್ಟ ವಿಶ್ವಾಸದಿಂದಲೂ ಹಿಂದುಸ್ಥಾನದ ಹೆಸರನ್ನು ಮೆರಸಿಸಿದರು. ಇವರೇ ಮುಮುಕ್ಷುಗಳು. ಮುಮುಕ್ಷುಗಳು ಆ ಜ್ಞಾನದ ನಿಮಿತ್ತ ಪ್ರಯತ್ನ ಮಾಡುತ್ತಾ ತಮ್ಮಲ್ಲಿ ಶಮಾದಿಗಳನ್ನು ವೃದ್ಧಿಯಾದ ಕೂಡಲೇ ಅವರಿಗೆ ಈಶ್ವರನ ಕೃಪೆಯಿಂದ ಗುರು ಸಿಕ್ಕಿ ಆತ್ಮಬೋಧವಾಗಲು, ಅವರನ್ನು ಸಾಧಕರೆಂದು ಹೇಳಬೇಕು. ಈ ಸಾಧಕರು ಯಾವಾಗ್ಯೆ ದೇಶದಲ್ಲಿ ಹೆಚ್ಚುವರೋ ಆವಾಗಲೇ ದೇಶಕ್ಕೆ ಏಳಿಗೆ ಬರುವುದು. ಸಾಧಕರು ವ್ಯವಹಾರವನ್ನು ಲೋಕದ ಉನ್ನತಿಗಾಗಿ ನಡಿಸಿ ಯಾವಾಗಲೂ ತಮ್ಮ ಸ್ವರೂಪದ ಕಡೆಗೆ ದೃಷ್ಟಿಯಿಟ್ಟು ತಮ್ಮ ನಿಜ ಆತ್ಮಾಭಿವೃದ್ಧಿ ಸಾಧನೆಯನ್ನು ಮಾಡಬೇಕು. ಇಂಥಾ ಸಾಧಕರಿಗೆ ಆತ್ಮನು, ಭವದ ಆನಂದವೃತ್ತಿಯು ಯಾವಾಗಲೂ ಇದ್ದದರಿಂದ ಅವರು ಧೀರರೂ ಶಾಂತರೂ ಆಗಿ, ಯಾವ ಕಾರ್ಯವನ್ನು ಸಾಧಿಸಲೂ ಯೋಗ್ಯರಾಗಿಯೇ ಇರುವರು. ಯಾವ ಸಮಯದಲ್ಲಿಯೂ ಆತ್ಮರೂಪವು ನಮ್ಮಲ್ಲಿರಲು ದೇಶ ಊರ್ಜಿತೆಯ ವಿಷಯದಲ್ಲಿ ಹಿಂತೆಗೆಯಬೇಕೆ? ನಮ್ಮ ಪುಸ್ತಕಜ್ಞಾನಿಗಳಾದರೊ ನಾವು ಲೋಕವನ್ನೇ ಪ್ರೀತಿಸಬೇಕೆಂಬ ಆಲೋಚನೆ ಮಾತ್ರದಿಂದ ಸುಮ್ಮನಿದ್ದುಕೊಂಡು ದೇಶದ ಜನರು ಪೀಡನೆಯಿಂದ ಕಷ್ಟಪಡುವಾಗ ತುಷ್ಣೀಭಾವದಿಂದಿರುವರು. ಇಂಥಾ ಜಡಸ್ವಭಾವವು ಪಾಷಾಣಕ್ಕೆ ಮಾತ್ರ ಯೋಗ್ಯವಲ್ಲದೆ ಮನುಷ್ಯರಿಗೆ ಹೇಳಿದ್ದಲ್ಲ. ಬೊಂಬಾಯಿಯ ಶಿರ್ಡಿ ಪ್ರಾಂತ್ಯದ ಸಾಯೀ ಮಹರಾಜ ಎಂಬ ಸಾಧುಗಳು ಬ್ರಹ್ಮಾನಂದದಲ್ಲಿ ಲೀನವಾಗಿದ್ದು ಸುತ್ತುಮುತ್ತಲಿನ ಜನರು ಹೀನಸ್ಥಿತಿಯಲ್ಲಿದ್ದು ಹಿಂದೂ ಮುಸಲ್ಮಾನರೆಂಬ ಭೇಧದಿಂದ ಹೊಡೆದಾಡುವುದನ್ನು ನೋಡಿ, ಸುಮ್ಮನೆ ದುಃಖಪಡುತ್ತಿದ್ದರು. ನೀವು ಒಂದೇ ತತ್ವರೂಪವಾಗಿದ್ದು ಒಂದೇ ಸದ್ವಸ್ತುವನ್ನು ಬೇರೆಬೇರೆ ರೂಪ

ದಿಂದ ಕರೆಯುತ್ತೀರಿ; ಹಿಂದುಗಳೇ ಮುಸಲ್ಮಾನರ ಅಣ್ಣತಮ್ಮಂದಿರಾಗಿದ್ದಾರೆ. ಆರು ಸಾವಿರವೋ (ಅಥವಾ ಅದಕ್ಕೆ ಮುಂಚಿತವಾಗಿಯೋ) ನಾಗರಿಕತನದ ಉಚ್ಚಸ್ಥಿತಿಯನ್ನು ಹೊಂದಿ, ಆತ್ಮಬೋಧವನ್ನು ಪಡೆದ ಋಷಿಪುತ್ರರೇ, ನಿಮ್ಮ ಜ್ಞಾನವು ಕಾರ್ಯದಲ್ಲಿ ಫಲಿಸದೆ ಇದ್ದರೆ ಸುಮ್ಮನೆ ಹಿಂದೂಮಾತೆಯಲ್ಲಿ ಜನ್ಮವನ್ನು ಯಾಕೆ ಪಡೆದಿರಿ. ಗೊಂದಾವಲೀ ಮಹರಾಜರು ತಮ್ಮ ದೇಶದ ದುರ್ಭಿಕ್ಷತೆಯನ್ನು ನೋಡಿ, ಜ್ಞಾನಭಿಕ್ಷೆಯನ್ನೂ ಅನ್ನಭಿಕ್ಷೆಯನ್ನೂ ಕೊಡಲಿಕ್ಕೆ ಸಿದ್ಧರಾಗಿದ್ದರು. ಹಾಗೆಯೇ ರಾಮಕೃಷ್ಣ, ಚಿಂದೀಬುವಾ ಮತ್ತು ಆರೂಢಸ್ವಾಮಿಯವರು ತಮ್ಮ ಆರೂಢಸ್ಥಿತಿಯನ್ನು ಬಿಟ್ಟು, ನಮ್ಮಕೂಡೆ ಮಕ್ಕಳಹಾಗೆ ಬೋಧಮಾಡಿ, ತಮ್ಮ ನಿಜ ಆನಂದಸ್ಥಿತಿಯನ್ನು ಕೊಡಲಿಕ್ಕೆ ಸಿದ್ಧರಾಗಿದ್ದಾರೆ. ಇಂಥಾ ಅನೇಕ ಸಾಧುಗಳು ದೇಶದಲ್ಲಿ ತಮ್ಮ ತಪಃ ಜ್ಞಾನ ಸಾಮರ್ಥ್ಯದಿಂದ ಹಿಂದುಸ್ಥಾನಕ್ಕೆ ಜೀವನಕಲೆಯನ್ನು ತಂದಿರುವರು. ಇವರಂತೆಯೇ ಸಾಕ್ಷಾತ ಭಗವಾನ ದತ್ತಾತ್ರೇಯನೇ ನಮ್ಮ ದೇಶಕ್ಕೆ ಧೀರತೆಯನ್ನೂ, ನಿಶ್ಚಲತೆಯನ್ನೂ, ಸಮಭಾವವನ್ನೂ ಕೊಡಲಿಕ್ಕೆ ಮನುಷ್ಯರೂಪವನ್ನು ತಾಳಿ ಇರುವರು. ಹೀಗೆ ಅಸಂಖ್ಯ ಪುಣ್ಯಾತ್ಮರೂ ಸಾಕ್ಷಾತ ಸೃಷ್ಟಿಪೋಷಕನಾದ ಈಶ್ವರನೇ ಇಲ್ಲಿ ಬಂದು, ನಿನ್ನನ್ನು ಸಲಹಲು, ಈ ಭೂಮಿಯ ಪುಣ್ಯವು ಎಷ್ಟು ಇರಬೇಕು. ಹೀಗೆ ದೇವಭೂಮಿಯೆಂತ ಎಣಿಸಿದ ಈ ದೇಶಕ್ಕೆ ನಾವಾದರೂ ಇದಕ್ಕೆ ಉನ್ನತಿಕಾಲ ಬರಲಿಲ್ಲ ಎಂದು ಕೂಪಮಂಡುಕರಾಗಿ ದ್ವೇಶವನ್ನು ಕಟ್ಟಿ, ನಿಜತತ್ವದ ಪ್ರೇಮವನ್ನು ಬೆಳಸುವ ಮಾರ್ಗವನ್ನೇ ತ್ಯಜಿಸುತ್ತೇವೆ. ಭಾರತಕುಲಜ್ಞರೇ, ನಿಮ್ಮ ಸಾಧುಗಳಾದರೋ ತಾವು ಪಡದ ಉನ್ನತ ಅಧ್ಯಾತ್ಮನಿಧಿಯನ್ನು ನಿಮ್ಮ ಸಲುವಾಗಿಯೇ ಇಟ್ಟುಕೊಂಡಿರುವರು. ಭ್ರಾತೃರೇ, ಆತ್ಮೀಯಮಿತ್ರರೇ, ವಿಶ್ವಮಾತೆಯ ಧರ್ಮದ ಜಾಗೃತಿಯ ಸಮಯ ಬಂದು ಒದಗಿರುವುದು. ಆ ಧರ್ಮದ ಮುಖ್ಯ ತತ್ವವು ಸತ್ಯ, ವಿಶ್ವಾಸ, ಪ್ರೇಮ ಮತ್ತು ಆತ್ಮಸಾಧನೆ, ಇವನ್ನು ಪಡೆದು, ದೇಶಕಾರ್ಯವನ್ನು ನಡೆಸಬೇಕೆಂಬುದೇ ನಮ್ಮ ಕರ್ತವ್ಯವು.



# ಪದ್ಯಮಾಲಿಕೆ.



ಗುರುರ್ಬ್ರಹ್ಮಾ ಗುರುರ್ವಿಷ್ಣು ಗುರುರ್ದೇವೊ ಮಹೇಶ್ವರಃ। ಗುರುಸ್ಸಾ ಕ್ಷಾತ್ಪರಬ್ರಹ್ಮಾ। ತಸ್ಮೈ ಶ್ರೀಗುರುವೇ ನಮಃ। ಗುರುವೆ ಸರ್ವಲೋಕಾನಾಂ। ಭಿಷಜೆ ಭವರೋಗಿಣಾಂ। ನಿಧಯೆ ಸರ್ವ ವಿದ್ಯಾನಾಂ। ದಕ್ಷಿಣಾಮೂರ್ತಯೇ ನಮಃ। ಗುರುಂ ಗಣಪತಿಂ ದುರ್ಗಾಂ। ಭಾಸ್ಕರಂ ಶಿವಮಚ್ಯುತಂ ಬ್ರಹ್ಮಾಣಂ ಗಿರಿಜಾಂ ಲಕ್ಷ್ಮಿಂ। ವಾಣೀಂ ವಂದೆ ವಿಭೂತಯೆ। ಸರಸ್ವತಿ ನಮಸ್ತುಭ್ಯಂ। ವರದೇ ಕಾಮರೂಪಿಣಿ। ವಿದ್ಯಾರಂಭಂ ಕರಿಷ್ಯಾಮಿ। ಸಿದ್ಧಿರ್ಭವತು ಮೆ ಸದಾ॥ ಅಚತುರ್ವದನೊ ಬ್ರಹ್ಮಾ। ದ್ವಿಬಾಹುರಬಲೋ ಹರಿಃ। ಅಫಾಲಲೋಚನಶ್ಶಂಭೊ। ಭಗವಾನ್ಬಾದರಾಯಣಃ॥

ಶ್ರೀಮನ್ಮಂಗಳ ಗೌರಿ ಚಿತ್ತನಿಲಯಂ। ಶ್ರೀ ಸಚ್ಚಿದಾನಂದನಂ। ಶ್ರೀಮದ್ಭಕ್ತಕುಲಾಭಿಸೋಮಸತತಂ। ನಿಷ್ಕಾಮನಂ ಭೀಮನಂ॥ ಬ್ರಹ್ಮೇಂದ್ರಾಮರಚಂದ್ರವಂದ್ಯಧರನಂ। ನಿತ್ಯಂ ಸ್ವಯಂಧಾಮನಂ। ಬ್ರಹ್ಮಾನಂದವ ಮಾಳ್ಕೆನುತ್ತೆ ನುತಿಪೆಂ। ಶ್ರೀದಕ್ಷಿಣಾಮೂರ್ತಿಯಂ॥ ೧॥

॥ ಶ್ರೀಗುರುವೇ ನಮಃ॥

1. ಗುರುಮಹರಾಜಗುರು। ಜೈ ಜೈ। ಪರಬ್ರಹ್ಮಸದ್ಗುರು। ದತ್ತಾತ್ರೇಯ। ಪರಬ್ರಹ್ಮಸದ್ಗುರು॥ ಗುರು ಪ॥

ಗತಿಸಾಧನೆಮಾಡೂ। ಗುರುವಿಗೆ। ನುತಿಸಿ। ಮತಿಯ। ಬೇಡೂ॥ ಸತಿ। ಸುತ। ಹಿತ। ಪ್ರಾಪಂಚದಿ। ಸಲಹುವ। ಸತತಾಂಬಿಕೆ। ಸಂಜಾತನ ಭಜಿಸುತ॥ ಗತಿ॥ ೧॥

ಕೊಬ್ಬಿದ ಮದದಿಂದಾ । ಸಿರಿಯಿಂ । ದುಬ್ಬಿದ ಗುಣದಿಂದಾ ॥ ಅಬ್ಬರದಾಹಂಕಾರವ ಮಾಡದೆ ಸಾಂಬಕುಮಾರನ ಭಜಿಸು ನಿರಂತರ ॥ ಗತಿಸಾಧನೆ ॥ ॥ ೨ ॥

ಕಡುತರ ತಪದಿಂದಾ । ಈರ್ವರ । ಬಿಡದು ಮೋಹದಿಂದಾ ॥ ಮೃಡಸುತನೆಂಬೋ ಭಜನೆ ಸದಾ ದಿನ । ಬಿಡದಿರುವದೆ ಸಂಸಾರಕೆ ಕಷ್ಟಾ ॥ ಗತಿಸಾಧ ॥ ॥ ೩ ॥

ಮು ॥ ಓಂಗುರು ಓಂಗುರು ಪರಾತ್ಪರಾಗುರು ಓಂಕಾರಾಗುರು ತವಶರಣಂ ॥ ಓಂ ॥ ಶ್ರೀ

2. ಸದ್ಗುರುವಿಗೆ ನಾ ಏನ ಮಾಡಿ । ನ್ನುದ್ಧಾರಾಗುವೇ । ಅಂಥಾ । ಶ್ರೀಗುರುವಿಗೆ ನಾ ಏನ ಮಾಡಿನ್ನುದ್ಧಾರಾಗುವೇ ॥ ಪ ॥

ದೇಹಾತೀತಾ ನಾದಾ ಸದ್ಗುರು । ಚರಣಕೆ ಎರಗುವೇ ॥ ಸದ್ಗುರು ॥ ಆ ॥ ಪ ॥ ತಾರಕಮಂತ್ರ ಉಪಾದೇಶ । ಕರ್ಣಾದೊಳಿಟ್ಟಾ ॥ ಯೆನ್ನ ॥ ಕರ್ಣಾದೊಳಿಟ್ಟಾ ॥ ಮಾಯಾಮೋಹಾ ಬೇಲೀಕಡಿದೂ ಭ್ರಾಂತಿಯ ಸುಟ್ಟಾ ॥ ಯೆನ್ನಾ ॥ ಭ್ರಾಂತಿ ॥ ಸದ್ಗು ॥ ೧ ॥ ನೆತ್ತಿಯಮೇಲೆ ಕರ ವಾಹಿಟ್ಟು । ನಿಜವೋ ನೀನೆಂದಾ ॥ ಅಂತಾರಂಗ ತೋರಿಸಿಕೊಟ್ಟು । ಭವಭಯ ಬಿಡಿಸೀದಾ ॥ ಯೆನ್ನ ॥ ಭವ ॥ ೨ ॥ ಸದ್ಗುರುನಾಥ ಗಾಣ್ಗಾಪುರವಾಸ । ಆತನ ದಯದಿಂದಾ ॥ ಸಗುಣರೂಪನಾಗಿ ಮೆರೆವಾ । ಪರಮಾಆನಂದ ॥ ೩ ॥ ಮು ॥ ಪರಮಾನಂದ ಸದ್ಗುರುತಂದೆ ಉದ್ಧಾರಾದೆವು ನಿಮ್ಮಿಂದಾ ॥

3. ದತ್ತಗುರು ಜಯ ದತ್ತಗುರು ॥ ದತ್ತಾತ್ರೇಯ ದತ್ತಗುರು ॥ ಪ ॥ ಆದಿನಾಥ್ ದೀನನಾಥ್ ॥ ಬ್ರಹ್ಮರೂಪ ದತ್ತಗುರು ॥ ೧ ॥ ಶಂಖ ಚಕ್ರ ಗದಾ ಧರ ॥ ಬ್ರಹ್ಮ ॥ ದ ॥ ೨ ॥ ಅನುಸೂಯಾ ವರವ ಪುತ್ರ ॥ ಬ್ರಹ್ಮರೂ ॥ ದ ॥ ೩ ॥ ಭಕ್ತಕಾರ್ಯ ಕಲ್ಪವೃಕ್ಷ ॥ ಬ್ರಹ್ಮರೂ ॥ ದ ॥ ೪ ॥ ಸಚ್ಚಿತಾಅತಿ ಸುಖಸಾಗರ ॥ ಬ್ರಹ್ಮರೂ ॥ ದ ॥ ೫ ॥

ಮಾತಾಪಿತಾ ಹಿತಾದ ಬಂಧು ‖ ಬ್ರಹ್ಮರೂ ‖ ದ ‖ ೬ ‖ ಏಕಾಜನಾರ್ದನ ದತ್ತಾವಧೂತ್ ‖ ಬ್ರಹ್ಮರೂ ‖ ದ ‖ ೭ ‖ ಪೂರ್ಣಬ್ರಹ್ಮಾ ಸನಾತನ ‖ ಬ್ರಹ್ಮರೂ ‖ ದತ್ತ ‖ ೮ ‖ ಮು ‖ ವಾಡೀನಿರಂಜನ ದತ್ತಾತ್ರೇಯಾ । ಗುರುವಾಹೀ ನಿರಂಜನದತ್ತಾತ್ರೇಯ ‖

4. ದತ್ತದಿಗಂಬರನೇ । ಪಾಲಿಸು । ಅತ್ರಿಮುನೀಸುತನೇ ‖ ಪ ‖ ಔದುಂಬರವಾಸ । ಪೋಷಿಸು । ಸುಂದರ ಮೃದುಹಾಸಾ ‖ ಮಂದರ ಮಂದಿರ । ಮುನಿಜನ ತೋಷ । ವಂದಿಪೆ ಗುಣತೋಷ ‖ ದೇವ ‖ ದತ್ತ ‖ ೧ ‖ ತ್ರೈಮೂರ್ತಿರೂಪಾ । ಕಳೆವುದು । ಭಯಘನತಾಪ । ಜಯಿಸಿದೆ ಕಾಮನ । ಗುರುಕುಲ ದೀಪ । ಕ್ಷಯರಹಿತ ಸ್ವರೂಪ ‖ ದೇವಾ ‖ ದತ್ತ ‖ ೨ ‖ ಅನುಸೂಯಾ ತನಯ । ರಕ್ಷಿಸು ಅನುದಿನ ಕಮನೀಯ ‖ ಘನತರ ಮಹಿಮ । ದೂರಿತಮಾಯಾ । ಚಿನುಮಯ ಗುರುರಾಯಾ ‖ ದೇವಾ ‖ ದತ್ತ ‖ ಮು ‖ ಅತ್ರಿಯನಂದನ ಗುರು ಗೋವಿಂದಾ ‖ ದತ್ತಾತ್ರೇಯ ಪರಮಾನಂದಾ ‖ ಶ್ರೀ ‖

5. ದತ್ತಾತ್ರೇಯ ಅವಧೂತ । ದಿಗಂಬರ । ನಿತ್ಯನಿರಂಜನ ಶುಭಕರನೇ ‖ ಪ ‖ ಮುಕ್ತಿಯ ಪದವಿಯ । ನಿತ್ಯದಿ ಸಾಧಿಸಿ ‖ ಸತ್ಯದ ನದಿಯೊಳು ನಲಿದಿಹನೆ ‖ ದತ್ತಾ ‖ ೧ ‖ ಆರನುಮೀರಿಹೆ । ಮೂರನು ತರಿದಿಹೆ ‖ ಸಾರದೆ ಏಳನೆ ಮನೆಗಾಗಿ ‖ ಯಾರಿಗು ಸೇರದ । ನಾರಿಯ ಕೂಡಿದೆ ಮೂ ‖ ರಾರಿಯೊಳ್ಯೈ ಕ್ಯಾವ ನೀ ಪಡದೇ ‖ ದ ‖ ೨ ‖ ಧರೆಯಲಿ ಕಂಡಿಹ । ದುರುಳರ ಕೊಂದಿಹೆ । ಮುರಿದಿಕ್ಕಿಹೆ । ಭವ ಬೀಜವನೂ ‖ ಶರಣರ ಸಲಹಿದೆ । ಸ್ಥಿರದಲಿ ನಿಂದಿಹೆ । ಕರುಣವ ತೋರಿಸು ಮನ್ನಲಿದೂ ‖ ದ ‖ ೩ ‖ ಸ್ತುತಿಸಲು ಅರಿಯೆನು । ನುತಿಸಲು ತಿಳಿಯೆನು । ಗತಿಯೆನು ಕಾಣೆನು ಈ ಭವದೀ ‖ ಅತಿಶಯದಿಂದಲಿ । ಗತಿಯನು ಕಾಣಿಸು ಮಿತವಿಲ್ಲದ ನಿನ್ನ ಪಾದದಲೀ ‖ ದ ‖ ೪ ‖ ಕರ್ಮದಿ ಜನಿಸ್ಸಿದೆ । ನಿರ್ಮಳನಾದೆನು । ಧೂಮಿಸುತಿಹ ಭವ । ಶರಧಿಯಲೀ ‖ ಕರ್ಮವ ತರಿದಾ । ನಿರ್ಮಲಮತಿಯನು । ನಿರ್ಮಿಸು

ಯೆನಗತಿ ದಯುದಲ್ಲೀ ॥ ದ ॥ ೫ ॥ ತರಳನ ಸಲಹೈ । ಶರಣರೊಳ್ಕೂಡಿಸು । ದುರಿತಗಳೆಲ್ಲವ ನೀ ತರಿದೂ ॥ ಪರದಲಿ ಮೋಕ್ಷವ । ಇಹದಲಿ ಸುಖಗಳ । ಕರುಣಿಪುದೈ ನೀ ಮನವಲಿದೂ ॥ ದತ್ತಾ ॥ ೬ ॥ ಮು ॥ ದತ್ತ ದತ್ತ ಜೈ ಗುರುಗೋವಿಂದಾ । ದತ್ತಾತ್ರೇಯಾ ಪರಮಾನಂದಾ ॥

6. ಯಾ ಗುರುಚರಣಾ । ತುಮಿ ಸದಾ ಮನಾರಮವಾ ॥ ಸದೋದಿತ ॥ ಸದಾಮನಾ ॥ ಪ ॥ ಸೋಡುನಿ ಮಾಯಾ । ಮಮತಾ ಸರ್ವಹೀ । ಗುರುಚರಣರಮವಾ ॥ ಸದೊ ॥ ಭವಸಾಗರೀಂ ಚ । ಮಾಯಾ ಸೋಡುನೀ । ತತ್ವದಸುಖ ತುಮಿಘ್ಯಾ ॥ ಸದೋದಿಕ ॥ ೨ ॥ ಸದಾಶಿವಾತ್ಮಜಘೇವುನಿಠಾಳಿ । ದಾರೋನಿತ್ಯಠಾವಾ ॥ ಸದೊ ॥ ೩ ॥ ಮು ॥ ಪರಮಾನಂದಾ ಪಾವನಮೂರ್ತಿ । ಪತೀತಪಾವನ ತವಶರಣಂ ॥

7. ಭಜರೇ ಗುರುಮಂತ್ರಂ । ಮಾನಸ । ಭಜರೇ ಗುರು ॥ ಪ ॥ ಭಜ ಗುರುಮಂತ್ರಂ । ಪರಮುಪವಿತ್ರಂ । ನಿಜಪದದಾಯಕ । ಚಿನ್ಮಯಸೂತ್ರಂ ॥ ಅ ॥ ಪ ॥ ನಿರ್ಮಲ ಹಾ ಮಂತ್ರಂ । ಜಪತೀ । ಅಜಹರಿಹರ ಮಿತ್ರಂ ॥ ಅತ್ರಿಯ ಪುತ್ರಂ । ಶ್ರೀ ದತ್ತಾ ಸ್ಮರೆ । ಆಸಕ್ತ ಪಾಣಿಂ । ಆವೀ ಮುಕ್ತಿಂ ॥ ಭ ॥ ೧ ॥ ಪಾವನೆ ಹೇ ನಾಮಾ । ಭವನಿಧಿ । ತಾರಕ ಹೋ ಸುಗಮಾ ॥ ಆಗಮ ನಿಗಮಾ । ಆರಾಮಾಸುಖ । ವಿಶ್ರಾಮಂ ಭಜೆ ಗುಣಧಾಮಾ ॥ ಭ ॥ ೨ ॥ ಸಚ್ಚಿತ್ಸುಖಕಂದಾ । ನಾಮಾ । ಸ್ಮರಣೆ ಆನಂದಾ ॥ ಛಂದರಮೇ ಮುನಿ । ಬೃಂದಜನಾಲ । ನಂದದೇತ ಶ್ರೀ । ರಂಗ ಸುನಿತ್ಯಂ ॥ ೩ ॥ ಮು ॥ ದತ್ತರಾಜ ಮಜವರಿ ಕರೀ ಕರುಣಾ । ಗುರು । ತುಜವೀಣಾ ಶರಣ ಜಾವುಸಾಂಗ ಕವಣಾ ॥ ಶ್ರೀ •

8. ದತ್ತಾತ್ರೇಯಂ । ತತ್ವ ವಿದೇಹಂ । ಚಿತ್ತಸರೋಜಿ ಸೇವೆಯಂ ॥ ದತ್ತಾ ॥ ಪ ॥ ನಿರುಪಮ ಕರುಣಾನಿಧಿ । ನಿಖಿಳಾಸ್ಪದ । ಅರುಣಾರುಣ ಗುರು । ಚರಣಸರೋಜಿಂ ॥ ವ ॥ ೧ ॥ ಅತ್ಯಾದ್ಭುತ ಮಜ ।

ಮಮೃತ ಮಧೋಕ್ಷಜ ॥ ಅತ್ಯಂತ ಸುಖಾಲಯ । ಮಧುಲಂ ॥ ದತ್ತಾ ॥ ೨ ॥ ಹಂಸಾಶ್ರಮು ಹೃದ । ಯಾಂಬುಜ ಭಾಸ್ಕರ । ಹಂಸಾಲಂಬಿ ಜಟಾಪಟ ಮಕುಟಂ ॥ ದತ್ತಾ ॥ ೩ ॥ ಮು ॥ ಧಾವುನಿ ಯೇರೆ । ಗುರುರಾಯು ॥ ಸಂಕಟ ಮಝುಲಾ । ಪಾವಾಯಾ ॥ ಧಾ ॥ ಶ್ರೀ

9. ದತ್ತಾರಾಜ ಯೋಗೀ । ಜೈಜೈ । ಮಹಾರಾಜ ಯೋಗಿ ॥ ಪ ॥ ಕೋಟಿ ಚಂದ್ರಕಾ । ತೇಜ ಝೂಲತಹೈ । ಚಲೊ । ಆಪನಮೋ ॥ ಜೈ ॥ ದತ್ತಾ ॥ ೧ ॥ ಯೋಗದಂಡ । ಅವಧೂತ ದಿಗಂಬರ ಬನಾರಸಾಮೆ ರಹನೆವಾಲ ॥ ದತ್ತಾ ॥ ೨ ॥ ಮಹಾದೇವಸುತ । ಧ್ಯಾನ ಧರತ । ಜಬ್ ಸಬಹಿ । ದರುಶನ್ ಪಾಯ ॥ ದತ್ತಾ ॥ ಸಬಾಹಿ । ದರುಶನ್ । ಪಾಯ ॥ ೩ ॥ ಕೃಪಾಕರೋ ಹಮ್ । ದಿವಾಕರೋಹಂ । ದೀನರಂತಹೈ । ದತ್ತಾ । ದೀನರಂತಹೈ ॥ ದತ್ತಾ ॥ ೪ ॥ ಮು ॥ ದತ್ತಾ ದಯ ದೋರ್ ದಯಾದೋರ್ ದಯಾದೋರೋ ॥ ಕೃಪೆಮಾಡ್ ಕೃಪೆಮಾಡ್ ಕೃಪೇ ಮಾಡೋ ॥ ಶ್ರೀ

10. ಶ್ರೀ ಗುರುಮಾಂ ಪಾಹಿ । ಸಂತತ ॥ ಶ್ರೀ ಗುರುಮಾಂ ಪಾಹಿ ॥ ಪ ॥ ರಾಗರಹಿತ ಮುನಿ । ಹೃದಯಾಬ್ಧಿ ವರ ಸೋಮ । ಆಗಮ ವಂಧ್ಯಭಿ । ರಾಜ ಸದ್ಗುಣ ಸ್ತೋಮ ॥ ಶ್ರೀಗುರು ॥ ೧ ॥ ಪ್ರಣವ ಪರಾತ್ಪರನೇ । ಅನಘನೆ । ಅನುಪಮ ಅದ್ವಯನೇ । ವನಜ ಭವಾ ಚ್ಯುತ । ರುದ್ರ ವಂದಿತನೇ । ವನಜಭವಾಂಡ ಪಿಂಡಾಂಡ ಮಂಡಿತನೇ ॥ ಶ್ರೀ ಗುರು ॥ ೨ ॥ ಮಿಥ್ಯಮಾಯ ರಹಿತ । ನಿರ್ಮಲ । ಸತ್ಯ ಜ್ಞಾನ ಭರಿತ । ಸತ್ತು ಚಿದಾನಂದ । ನಿಜ ಪರಿಪೂರ್ಣನೆ । ಭಕ್ತರ ಭಾಗ್ಯದ । ನಿಧಿ ಯೆನಿಸುವನೇ ॥ ಶ್ರೀಗುರು ॥ ೩ ॥ ಪರಮ ತತ್ವಸಾರಾ । ಬೋಧಿಪ । ವರ ಗುಣಗಂಭೀರಾ । ಶರಣು ಶರಣು । ನಿಮ್ಮ । ಚರಣವ ನಂಬಿದೆ ಹರಗುರುಶಿವಲಿಂಗದಯಾನಿದೆ ॥ ಶ್ರೀಗುರು ॥ ೪ ॥ ಮು ॥ ದತ್ತ ದಿಗಂಬರ ಅವಧೂತಾ । ಸ್ವಾಮಿ ಜನಾರ್ದನ ಏಕನಾಥಾ ॥ ಶ್ರೀ

11. ಪಾಲಿಸು ಗುರುನಾಥಾ । ಕರುಣದಿ । ಪಾಲಿಸು । ಗುರುನಾಥಾ ॥ ಪ ॥ ಪಾಲಿಸು ಯೆನ್ನನು ಪಾವನ ಚರಿತನೆ । ನೀಲ ತೋಯದ ಮಧ್ಯ । ರಾಜಿಸುವಾತ್ಮನೆ ॥ ಪಾಲಿ ॥ ಅ ॥ ಪ ॥ ನಾಮರೂಪ

ರಹಿತಾ । ಆತ್ಮಾ । ರಾಮ ತ್ರಿಜಗ ಭರಿತಾ ॥ ಕಾಮಿತ ದಾಯಕ । ಕರ್ಮ ವಿದೂರನೆ । ಪ್ರೇಮಾಸ್ತಿ ಭಾತಿಯ ರೂಪನೆ ನಿರಘನೆ ॥ ಪಾ ॥ ೧ ॥ ದುರಿತ ತಿಮಿರ ಚಂದ್ರಾ । ವಂದಿತ । ಸುರಮುನಿ ದೇವೇಂದ್ರಾ ॥ ಉರು ಭವರುಜೆ । ಗೌಷಧ ವೆಂದೆನಿಪನೆ । ಪರಮಾದ್ವೈತ ಪ್ರಭೋಧನೆ ನಿರಘನೆ ॥ ಪಾ ॥ ೨ ॥ ಮೂರುಲೋಕ ಪ್ರಭುವೇ । ಭಕ್ತೋದ್ಧಾರಕನೆನಿಸಿರುವೇ । ಚಾರು ಹೃದಯ ಸಿಂಹಾಸನ ಮಧ್ಯದಿ । ಭೂರಿ ಆನಂದದಿ ಕುಳಿತಿಹ ದೇವನೆ ॥ ಪಾ ॥ ೩ ॥ ಪಂಚ ಸೂತಕ ದೂರಾ । ಮಿಥ್ಯ । ಪ್ರ । ಪಂಚ ಕಲುಷ ದೂರಾ ॥ ಸಂಚಿತ ಜ್ಞಾನಾ ಮೂಲಕುಠಾರನೆ । ಪಂಚಬ್ರಹ್ಮ ಸ್ವರೂಪನೆ । ನಿರಘನೆ ॥ ಪಾ ॥ ೪ ॥ ಗುರು ಶ್ರೀ ಶಿವಲಿಂಗಾ ರಂಗನೆ । ಪರಿಪರಿ ಭವಭಂಗಾ ॥ ನಿರುತಾಖಂಡ ನಿರಂಜನದ್ವಯನೇ । ನಿರುಪಮ ನಿರ್ಗುಣ ಸಗುಣ ರೂಪಕನೇ ॥ ಪಾ ॥ ೫ ॥ ಮು ॥ ದಿಗಂಬರಾ ಗುರು । ದಿಗಂಬರಾ ಶ್ರೀ ಪಾದ ವಲ್ಲಭ ದಿಗಂಬರಾ ॥ ಶ್ರೀ

12. ಮಂಗಳಾರತಿಯ ಎತ್ತಿರಿ ದತ್ತ ಮೂರುತಿಗೇ ॥ ಪ ॥ ತುಂಗಾ ಮಹಿಮಗೆ । ಭಂಗಾ ರಹಿತಗೆ ॥ ಮಂಗ ಳಾಕರಗೇ । ಜಯ । ಮಂಗಳಾ ಕರಗೇ ॥ ಮಂ ॥ ೧ ॥ ಸುಂದರಾನನಗೇ । ಬಹು ನಂದಾದಾಯಕಗೇ । ಕಂದಾ ವದನಗೆ । ತಂದೂ ಬೆಳಗಿರೆ । ಮಂದಾ ಹಾಸನಿಗೇ ಜಯ ॥ ಮಂಗಾ ॥ ೨ ॥ ಲೋಕಾ ಪೂಜ್ಯನಿಗೇ । ಘನ । ಶೋಕ ಹಾರಕಗೇ ॥ ಏಕಾ ರೂಪಗೆ । ನಾಕಾದಾತಗೆ । ಲೋಕ ಪಾಲಕಗೇ । ಜಯಾ ಮಂಗಳಾ ॥ ೩ ॥ ದಾತಾ ಗುರುವರಗೇ । ಜ್ಞಾನಾ ಚಿತ್ರಾ ಹಾರಕಗೇ ॥ ಮೃತ್ಯೂ ಹರನಿಗೆ । ಮತ್ತೆ ಬೆಳಗಿರೆ । ನಿತ್ಯಾನಂದನಿಗೇ ॥ ಜಯ । ಮಂಗಳಾ ॥ ೪ ॥ ತುಂಗಾರಹಿತಗೇ । ಭಂಗಾ ರಹಿತಗೆ । ಮಂಗಳಾಕರಗೇ ॥ ಮಂಗಳಾರತಿಯಾ । ಎತ್ತಿರಿ ದತ್ತ ಮೂರುತಿಗೇ ॥ ತುಂ ಗೇ ॥ ೫ ॥ ಶ್ರೀ

—⁂—

# IIನೇ ಅಧ್ಯಾಯ.

॥ ಗಣಪತಿಸ್ತುತಿ ॥

1. ಗುರು ಗಣಪತಿಯನು ನೆನೆ ಬೇಕು । ಸದ್ಗುರು ಕೃಪೆಯಾಗಿರ ಬೇಕು ॥ ನಾರಾಯಣ ಹರಿ । ನಾರಾಯಣ ಹರಿ । ನಾರಾಯಣ ಹರಿ ಯೆನಬೇಕು ॥ ೧ ॥ ಜಾಗ್ರತೆ ಜತನಾಗಿರ ಬೇಕು । ತಿರುಗುವ ನಾಯಿಯು ಬಿಗ ಬೇಕು ॥ ಗೋವಿಂದಾ ಹರಿ । ಗೋವಿಂದಾ ಹರಿ । ಗೋವಿಂದಾ ಯೆನಬೇಕು । ೨ ॥ ಒಳಗೆ ಹೊರಗೆ ಸಮನಿರ ಬೇಕು । ಆತ್ಮವಿಚಾರವ ತಿಳಿ ಬೇಕು ॥ ನಾರಾ ॥ ೩ ॥ ಮನಸಿನ ಭ್ರಾಂತಿಯ ಬಿಡ ಬೇಕು । ಮಾಯದ ಬಲೆಗಳ ಕಡಿ ಬೇಕು ॥ ಗೋವಿಂ ॥ ೪ ॥ ನಿಶ್ಚಲ ಯತಿಯಾಗಿರ ಬೇಕು । ಕಯ್ಯಲಿ ದಂಡವ ಹಿಡಿ ಬೇಕು ॥ ನಾ ॥ ೫ ॥ ಕಾಲನ ದಂಡವ ಮುರಿ ಬೇಕು । ಯಮ ಸಂಕಲೆಗಳ ಕಡಿ ಬೇಕು ॥ ಗೋವಿಂ ॥ ೬ ॥ ಶರಣು ಶರಣು ಯೆಂದು ನುಡಿ ಬೇಕು । ಗುರುವಿನ ಚರಣವ ಹಿಡಿ ಬೇಕು ॥ ನಾ ॥ ೭ ॥ ಇರುಳು ಹಗಲು ಹರಿ ಯೆನ ಬೇಕು । ಇಹ ಪರ ಗತಿಗಳ ಪಡಿ ಬೇಕು ॥ ಗೋ ॥ ೮ ॥ ಪುರುಷೋತ್ತುಮ ಹರಿ ಯೆನ ಬೇಕು ಪುರಂದರ ವಿಠಲನ ನೆನ ಬೇಕು ॥ ನಾ ॥ ೯ ॥ ಮು ॥ ವಿಘ್ನವ ಪರಿಹರಿಸೋ ಗ । ಜಾನನ । ತಾಯಿ ನಮಗೆ ತೋರಿಸೋ ॥ ಶ್ರೀ

2. ಭಜಿಸುವೆ ಗಜಮುಖ ದೇವನ । ಅಜ ಸುರ ಮನು ಮುನಿ ವಂದ್ಯನ ॥ ಪ ॥ ಗಜ ಚರ್ಮಾಂಬರ । ಧರ ಸುತ ಗಣಪನ । ಸುಜನೋದ್ಧಾರ ಗಣೇಶನ ॥ ಭಜಿಸುವೆ ॥ ೧ ॥ ಸಾಂಬ ಶಿವನ ವರ ಕಂದನಾ । ತುಂಬುರ ನಾರದ ಸೇವ್ಯನಾ । ಬೆಂಬಿಡದನುದಿನ ಭಜಕರ । ಕರುಣದಿ । ಸಂಭ್ರಮದಲಿ ಪೊರೆ ದಾತನಾ ॥ ೨ ॥ ದಶ ಭುಜ ಧರಿಸಿದ ದೇವನಾ । ಪಶುಪತಿ ಈಶ ಕುವರಾ ರನಾ । ವಸುಧೆ ಯೊಳಧಿಕ ಕುಟಚಾದ್ರಿ ಪುರ

ದೊಳು । ಕುಶಲ ದಿ । ನೆಲಸಿದ ದೇವನಾ ॥ ಭಜಿಸು ॥ ೩ ॥ ಮು ॥ ಹೇರಂಬ ಪೊರೆಯಾ । ಸಿದ್ಧಿಬುದ್ಧಿ ರಮಣಾ । ಗಣೇಶ ವಕ್ರತುಂಡ । ಅಖಂಡ ಭಜನಾ ॥

3. ನೆನೆವೆ ಎನ್ನ ಮನದಿ । ಹಸ್ತಿ ವದನನೆ ॥ ಪ ॥ ಸಲಹು ಮುದದಿ । ಸನಕ ಸನಂದನ । ಮುನಿ ಜನ ವಂದ್ಯನೇ ॥ ಘನ ಮಹಿಮನೆ ನಿಂ । ಮನವರತದೊಳು ॥ ನೆನೆ ॥ ೧ ॥ ಪಾಲಿಸು ದಯದಿಂದಾ ॥ ಲೋಕ । ಪಾಲನ ಮುದದಿಂದಾ ॥ ಸ್ಥೂಲ ಕಾಯ ನಿಗಮಾ ಗಮ ವಂದಿತ । ಕಾಲಕಾಲನೆ ಕಲ । ಬಾಲ ಸುರಾರ್ಚಿತ ॥ ನೆನೆವೆ ॥ ೨ ॥ ಹರನರ ಸಿಯ ಕುವರಾ । ಕರುಣಾ । ಕರ ಭವದುರಿತ ಹರಾ ॥ ಸುರನರ ಗಂಧ ರ್ವನ ಕಿಂ । ನರ ಕಿಂಪುರುಷ ಮಹೋರಗ । ನಮಿತ ಗಣೇಶಾ ॥ ನೆನೆವೆ ॥ ೩ ॥ ಘೋರ ದುರಿತನಾಶ । ಕರುಣಾ । ವಾರಿಧಿ ತನು ಭೂಷಾ ॥ ಧಾರುಣಿಯೊಳು ಇಡಗುಂಜಿ ಪುರೇಶಾ ॥ ನಾರದ ನಮಿತ ನೀ ಪೊರೆಯೊ ವಿಘ್ನೇಶಾ ॥ ನೆನೆವೆ ॥ ೪ ॥ ಮು ॥ ದೇವ ಗಜಾನನ ರೇ ಲಂಬೋದರ ಪೂರ್ಣ ಕೃಪಾಕರರೇ ॥

4. ಪಾಲಯ ಗಣನಾಥಾ ತ್ವಂ ಮಾಂಪಾಲಯ ಗಣನಾಥಾ ॥ ಪ ॥ ಬಾಲೇಂದೂದರ । ಬಾಲ ಸುಶೀಲಾ । ಪಾಲ ಹಿಮಾಂಶು ಕಲಾನ್ವಿತ ಲೋಲಾ ॥ ಪಾ ॥ ಅ ॥ ಪ ॥ ಗೌರಿಯ ಪುತ್ರಾ । ಶರಣು ಪವಿತ್ರಾ ॥ ಗೌರಿ ಸುಮಿತ್ರಾ । ಸರಸಿಜ ನೇತ್ರಾ ॥ ಪಾ ॥ ೧ ॥ ಚಾಮರ ಕರ್ಣಾ ॥ ಕಾಮಿತ ಪೂರ್ಣಾ ॥ ಹೇಮಾ ಭರಣಾ । ತಾಮಸ ಹರಣಾ ॥ ಪಾ ॥ ೨ ॥ ಮುನಿಜನ ಪೋಷಾ । ದನುಜ ವಿನಾಶಾ ॥ ಘನ ಗುಣದೋಷಾ । ವಿದಿತ ಸುಪೋಶಾ ॥ ಪಾ ॥ ೩ ॥ ಶರಪುರ ಭೂಷಾ । ಪರಮ ಪ್ರತಾಪಾ ॥ ಕರಿಮುಖ ಸದ್ಗುರು । ಪ್ರಣವ ಸ್ವರೂಪಾ ॥ ಪಾ ॥ ೪ ॥ ಮು ॥ ದಯದೋರು । ದಯದೋರು । ಗಜವದನಾ ॥ ಕೃಪೆಮಾಡು ಕೃಪೆ ಮಾಡು । ಕರಿವದನಾ ॥

5. ಗೌರೀ ವರಸುತ ಮೋಹನಮೇ । ಜಯ ಸಾಹಿ ಲಂಬೋದರ ನಮೋನಮೋ ॥ ಪ ॥ ಚಾರು ಚಂದನ । ಚರ್ಚಿತ ಗಾತ್ರ ॥ ವಾರಿಜ ನೇತ್ರ । ನಮೋ ನಮೋ ॥ ಗೌರಿವರ ॥ ೧ ॥ ವಿಘ್ನ್ಯ ವಿಧಾಯಕ । ವಿಘ್ನ ವಿದೂರಕ ॥ ಸಿದ್ಧಿ ವಿನಾಯಕ । ನಮೋನಮೊ ॥ ೨ ॥ ಶುಭ ಕರ । ಶೀಲ । ಸುಜನೋದ್ಧಾರ ॥ ಇಭ ಶುಂಡೀಲ । ನಮೋನಮೋ ॥ ಗೌರಿ ॥ ೩ ॥ ಪಾಶಾಂಕುಶ ಧರ । ಮೋದಕ ಹಸ್ತ ॥ ಸಾಹಿ ಲಂಬೋದರ । ನಮೋನಮೋ ॥ ಗೌರಿ ॥ ೪ ॥ ಮು ॥ ಸಿದ್ಧಿ ಬುದ್ಧಿ ರಮಣ । ವಿದ್ವಜ್ಜನ ಹರಣಾ ॥ ಗಣೇಶಾ । ವಕ್ರತುಂಡ ಅಖಂಡ ಭಜನಾ ॥

6. ತಾಂಡವ ನೃತ್ಯ ಕರೀ । ಗಜಾನನ ! ತಾಂಡವ ನಾಟ್ಯ ಕರೀ ॥ ಪ ॥ ತೆತ್ತಿಸ ಕೋಟಿ । ದೇವ ಮಿಳಾಲೆ । ಮಧ್ಯೆ ಶಿವ-ಗೌರಿ । ಗಜಾನನ ॥ ತಾಂಡವ ॥ ೧ ॥ ತಾಂಡವ ಧಿನ್‌ಧಿನ್ । ಧಿಮಿಕಿಟ । ವಾಜೆ ಮೃದಂಗ । ಬ್ರಹ್ಮ ತಾಳ ಧರೀ ॥ ಗಜಾನನ ॥ ತಾಂಡವ ॥ ೨ ॥ ಶ್ರೀ ರಾಮಾ ವಲ್ಲಭ । ದಾಸಾನ ಪೋಷವಿ । ಚಂದ್ರಾಮುಕರಿ ಶೋಭೆ । ಗಜಾನನ ॥ ತಾಂಡವ ॥ ೩ ॥ ಮು ॥ ಧಾವೋನಿ ಯೆರೆ । ಗಣರಾಯಾ ॥ ಸಂಕಟ ಮಜಲಾ ಪಾವಾಯಾ ॥

7. ವಿಘ್ನ ವಿಭಂಜನ ಹೋ । ಗಜಾನನ । ವಿಘ್ನ ವಿಭಂಜನ ಹೋ ॥ ಪ ॥ ತತಸ್ಮರಣಾ ವೀಣಾ ನಾಹಿ । ದುಸರಾ ಉನ್ನತ ಸಾಧನ ಹೋ ॥ ಗಜಾನನ ॥ ವಿಘ್ನ ॥ ೧ ॥ ದುಸ್ತರ ಸಂಸಾರಾಬ್ಧಿ ತರೀ ಹೀ । ಏಕಜಿ ಸಜ್ಜನ ಹೋ ॥ ಗಜಾನನ ॥ ವಿಘ್ನವಿ ॥ ೨ ॥ ದುರ್ಧರ ಕ್ಲೇಷಿಂ ಶಾಂತವಿ ಅಮ್ಹಾ ಸದ್ಗುಣ ಕೀರ್ತಣ ಹೋ ॥ ಗಜಾನನ ॥ ವಿಘ್ನ ॥ ೩ ॥ ತವನುಗ್ರಹ ಸಂಪಾದ ಕರೂನಿ । ಪ್ರೇಮಳ ವಂದನ ಹೋ ॥ ಗಜಾನನ ॥ ವಿಘ್ನ ॥ ೪ ॥ ಮು ॥ ಕೃಪಾ ಕರೋ । ಕೃಪಾಕರೋ ಗಣರಾಯ ॥ ಕೃಪಾ ಕರೋ ಗಣರಾಯ ॥ .

8. ರತ್ನಾಗರ್ಭದ ಗಣೇಶಾ । ಪಾಲಿಸೊ ನಿನ್ನಾ । ಭೃತ್ಯಾನಾದೇನು ಸರ್ವೇಶಾ ॥ ಪ ॥ ನಿತ್ಯ ನಿರ್ಮಲ । ನಿರಂಜನ ಸ್ವಪ್ರಕಾಶ । ಸತ್ಯ

ಜ್ಞಾನಾನಂದ । ಬ್ರಹ್ಮ ವಿಲಾಸೆ ॥ ರತ್ನಾಗರ್ಭಾದ ॥ ಅ ॥ ಪ ॥ ನೀರಜ ವೈರಿ ಜಟಾಜೂಟಾ । ಶ್ರೀ । ಮನ್ನಾರಾಯಣ ಜ । ಪೂಜಿತ । ನಾರದ ಮುನಿ ದಿವ್ಯಗಾನ ಸಂಪ್ರೀತ । ವಾರಣಾನನ ಪಾರ್ವತೀ ದೇವಿ ಪ್ರಿಯ ಸುತ ॥ ರತ್ನಾಗರ್ಭಾ ॥ ೧ ॥ ವರ ಗುಣ ಫಣಿಬಂಧದ । ಪೇರುರ ವೈರಾ । ಗ್ಯರು ವಜ್ರಕಟಿಸೂತ್ರನೆ । ಪರತತ್ವ ಬೋಧ । ಲಾಂಛಿತ ಮುದ್ರಹಸ್ತನೆ । ಉರು ವೇದ ಮೂಷಿಕರಾಜ ವಾಹನನೇ ॥ ರತ್ನಾ ॥ ೨ ॥ ನವಭಕ್ತಿ ಕಡುಬುರಾಶಿ । ಚಿತ್ರಾನ್ನ ಮೇಲ್ । ಸುವಿ ಚಾರ ಘೃತ ಸುರಿವೇ ॥ ನವದಳ ರನ್ನ ಭಾಜನದಲ್ಲಿ ಕಲಸುವೆ । ಸವಿ ಮಾಡಿ ಭಾವಕರಾಬ್ಜ ದಿಂದುಣಿಸುವೆ ॥ ರತ್ನಾ ॥ ೩ ॥ ಆಶೆಯಳಿದ ಕರ್ಪೂರ । ವೀಳ್ಯವು ಪಂಚ ಕ್ಲೇಶ । ಭಂಡನ ಕಜ್ಜಾಯ । ವಾಸನ ಹರತ್ರಯ ಗಂಧ ಲೇಪಿಸುವೆ । ಮೀಸಲಿಂದೀಪರಿ ಯರ್ಪಿಸಿ ನಮಿಸುವೆ ॥ ರತ್ನಾ ॥ ೪ ॥ ಪರಬ್ರಹ್ಮ ವಿದ್ಯಾನಿಧಿ । ನಿರ್ವಿಘ್ನದಿ । ಕರುಣಿಸೊ ಸರ್ವಜ್ಞನೇ । ಪರತತ್ವ ವಿದ್ಯಾರ್ಥಿ ಯಾಗಿಹೆ ದೇವನೆ । ಗುರುಶಿವ ಲಿಂಗಾಭಿದಾನ ನೀನೇ ॥ ರತ್ನಾ ॥ ೫ ॥



# IIIನೇ ಅಧ್ಯಾಯ.

॥ ಅಂಬಾಸ್ತುತಿ ॥

ಶ್ರೀ ಶಾರದಾಂಭಾಯ್ಯೈ ನಮಃ

1. ನಲಿದೂ ಬಾರಮ್ಮ ನಿಜ ಶಾರದೇ । ಯೆನ । ಗೊಲಿದೂ ಬಾರಮ್ಮ ಸುಖವಾರಿದೇ ॥ ಪ ॥ ಮಾಯಾಮೋಹಿನಿ ಯೆನ್ನ । ಕಾಯೇ ಅಂಬನ ಮುದ್ದು । ಜಾಯೇ ನವೇಶ್ವರ ಶಾರದೇ ॥ ತಾಯೆ । ಜಾಯೆ ನ ॥ ನಲಿದೂ ॥ ೧ ॥ ಪುಸ್ತಕ ಪಾಣಿ । ವಿಸ್ತಾರ ವೇಣಿ । ಹಸ್ತ ಕಡಗ ಝಣಕ್ಕಾರಿಣೀ ॥ ತಾಯೆ । ಹಸ್ತಾ ॥ ನಲಿದೂ ॥ ೨ ॥ ಕೊಲ್ಲಾ ಪುರದಿ ವಾಸೆ । ಮಲ್ಲಾ ಮರ್ಧಿನಿ ಈಶೆ ॥ ಫುಲ್ಲಾಲೋಚನೆ ಬಲ ಸಾಹಸೀ । ಕಾಯೆ ॥ ಫುಲ್ಲಾ ॥ ನಲಿದೂ ॥ ೩ ॥ ಮು ॥ ಅಂಬಾ ಪಾಹಿ ಜಗದಂಬಾ ಪಾಹಿ ॥ ಅಂಬಾ ಮುಖಾಂಬಾ ಜಗದಂಬಾ ಪಾಹಿ ॥

2. ಜಯ ಶಿವೇ ಲೋಕೈಕವಿಭವೇ ನತೇಷ್ಟದೇ ಸಾ । ಸದಾಶಿವೆ ॥ ಜಯ ॥ ಪ ॥ ಮಂಗಳಾರೂಪಳೇ । ತುರಂಗ ಪಯೋಧರೆ ॥ ಅಂಗದಲೀ । ಸಂಗವನೂ ॥ ೧ ॥ ಧ್ಯಾನಿಪೆ ನಿನ್ನನು । ಸಾನುರಾಗದಿ ನಾನು ॥ ಮಾನ್ಯವನೂ । ನೀವುದು ನೀಂ ॥ ೨ ॥ ಆ ರಾಮಪುರದಲ್ಲಿ । ಸ್ಥಿರವಾಗಿ ನೆಲಸಿದೆ । ಪರಮ ದಾಯಾಂ ಅನುಕರಿಸೊ । ಜಯಾ ॥ ೩ ॥ ಮು ॥ ಅಂಬಾ ವನದಿ ಬಂದೂ ಕರ ಪಿಡಿದೆನ್ನನು ನೀ ಕಾಯೋ ॥ ಅಂಬಾ ॥

3. ಕಾಮಿತಾರ್ಥ ತಾಯೇ । ಸುಜನರ । ಕಾಮಧೇನು ಪ್ರೀಯೇ ॥ ಪ ॥ ಆ ಮಹ ಸುರಮುನಿ । ಸ್ತೋಮ ವಿನುತೆ ನೀ । ತಾಮರಸಾಪ್ತತೆ । ಸೋಮ ಪ್ರಕಾಶೇ ॥ ಕಾ ॥ ಅ ॥ ಪ ॥ ನೀಲಾಂಬುಜ ಗಾತ್ರೇ । ನಿರಂತರ । ಶೂಲಧರನ ಕಾಂತೇ ॥ ಜಗದಾಂಬೇ ನೀ ಶುಂಭರ ಬೇಧಿನಿ । ನಿಗಮ ಗೋಚರ ಪರಿ । ಪರ ಮನಮೋಹಿನಿ ॥ ಕಾಮಿ

|| ೧ || ಅಗಣಿತ ಪರಿ ಪೂರ್ಣೇ | ಎಳೆನಗೆ | ಮುಗುದೆ ಮೋಹನ ಜಾಣೇ || ಜಗದಾಂಬೇ ನೀ ಶುಂಭರಭೇದಿನಿ || ನಿಗಮ ಗೋಚರ ಹರಿ ಹರ ಮನಮೋಹಿನಿ || ೨ || ವಿಲಸಿತ ಧರಬಿಂಬೇ | ಶಾಂಭವಿ | ಸುಲಲಿತ ಮುಕಾಂಬೇ || ಧರೆಯೊಳಧಿಕ ನದಿಪುರ ವರ ನಿಲಯೇ | ಚಲುವೆ ಶ್ರೀ ಶಾಂತಿಕ | ಪರಮೇಶ್ವರಿಯೆ || ಕಾಮಿ || ೩ || ಮು || ದೇವಿ ವನದಿ ಬಂದೂ | ಕರಪಿಡಿದೆನ್ನನು ನೀ ಕಾಯೇ ||

4. ಆಡುತ ಬಾರಮ್ಮ | ನಲಿ ನಲಿ | ದಾಡುತ ಬಾರಮ್ಮಾ || ಪ || ಆಡುತ ವರಗಳ | ನೀಡುತ ದಯುದಲಿ | ಬೇಡಿದವರಿಗೆ ಷ್ವಾರ್ಥವ ನೀಡುತ || ಆ || ಅ || ಪ || ಬೇಸರು ಬೇಡಮ್ಮಾ | ದಾಸರ | ದಾಸನು ನಾ ನಿಮ್ಮಾ || ವಾಸವ ಪೂಜಿತೆ | ವನರುಹನೇತ್ರ | ಸಾಸಿರ ನಾಮದ | ವಾಸುದೇವನ ಸತಿ || ಆಡು || ೧ || ಕರದರೆ ಓ ಯೆಂದೂ | ತಾಯೆ ಎನ್ನ | ಮೊರೆಯು ಲಾಲಿಸಿ ಬಂದೂ || ಮರೆಹೊಕ್ಕ ಜನರನ್ನು | ಕರುಣದಿ ಪಾಲಿಸು | ಗುರು ದತ್ತಾತ್ರೇಯ | ತಾಯೆ ಮುಕಾಂಬಿಕೆ || ಆಡುತ || ೨ || ಧರೆಯೊಳ ಧಿಕವಾದಾ | ಮಂಜುಗುಣಿ | ಪುರ ದೊಳು ಸ್ಥಿರವಾದಾ || ಶರಣು ಜನರಿಗೆಲ್ಲ | ಉನ್ನತ ವರವೀವ | ಮುರಹರ | ವೆಂಕಟ ರಮಣ ನರ್ಧಾಂಗಿಯೆ || ಆ || ೩ || ಮು || ಅಂಬಾ ಪಾಲಿಸೆ ಒಲಿದೂ | ಎನ್ನಯ | ಜಿಂಹ್ಮೆಯೊಳಗೆ ನಲಿದೂ || ಅಂಬಾ ||

5. ಪಾಲಿಸು ಗೀರ್ವಾಣಿ | ಕೀರ್ತಿ ವಿ | ಶಾಲ ಪುಸ್ತಕವಾಣಿ || ಪ || ನೀಲಕುಂತಳೆ ಖಳ | ಜಾಲವಿಹಾರಿಣಿ || ಲೋಲನಯನೆ ಗುಣ | ಶೀಲೆ ಕಲ್ಯಾಣೀ || ಪಾ || ಅ || ಪ || ಶಾರದೆ ಮಹಮ್ಮಾಯೆ | ವೀಣಾ | ಧಾರಿಣಿ ಕಮನೀಯೇ || ನಾರದ ಮುಖ್ಯ | ಮನುಮುನಿಪೂಜಿತೆ | ಸಾರಸಭವ ನರ್ಧಾಂಗಿ | ಕೃಪಾನಿಧೆ || ೧ || ವರ ಶೃಂಗಾಪುರದೀ | ನಂಬಿಹ | ಶರಣ ರ್ಗೆ ಸಂತಸದೀ || ಪೊರೆಯುತ ನೆಲಸಿಪ | ಭಾರತಿ ಯೆನ್ನನು | ಕರುಣದಿ ರಕ್ಷಿಸು | ಚರಣಕೆ ನಮಿಸುವೆ || ಪಾಲಿಸು || ೩ || ಮು || ಚರಣವ | ಭಜಿಸುವೆನು | ದೇವಿ | ಕರುಣದಿ | ಪೊರೆಯೆನ್ನಾ ||

6. ರಾಜ ರಾಜೇಶ್ವರಿಯೇ । ಪಾಲಿಸು । ರಾಜಶೇಖರಿ ಪಾಲಿಸು ॥ ಪ ॥ ರಾಜ ಮುಖಿ । ಮೂಲೋರ್ಕ ಪೂಜಿತೆ । ರಾಜತೇಜ ವಿರಾಜಿತೇ ॥ ಅ ॥ ಪ ॥ ಗಿರಿಜೆ ಲಕ್ಷ್ಮಿಯು ವಾಣಿ ಎನಿಸುತ । ಶರಣ ಭಕ್ತರ ಪೊರೆಯುತಾ ॥ ಪರಮಭೋಗವು ಮೋಕ್ಷಪದವಂ । ಸುರತರುವಿನಂತೀಯುವಾ ॥ ರಾಜ ॥ ೧ ॥ ನಾದಬಿಂದೂ ಕಳಾ ಸ್ವರೂಪಿಣಿ । ಮೋದ ಸಚ್ಚಿದ್ರೂಪಿಣೀ ॥ ಆದಿ ಬ್ರಹ್ಮಪರಾಯಿಣೀ ॥ ರಾಜ ॥ ೨ ॥ ಬುಗರಿ ಯಂತಾ । ಡಿಸುವೆ ನೀನೂ । ನಗುತ ಮುಂಮೂರ್ತಿಗಳನೂ ॥ ನಿಗಮ ವಂದಿತೆ ರಂಗ ಗುರುವಿನ । ಅಗಲದಿರುತಿಹೇ । ಅನುದಿನ ॥ ರಾ ॥ ೩ ॥ ಮು ॥ ಅಂಬಾ ದಯದೋರು । ದಯದೋರೂ । ದಯದೋರೂ । ದೇವಿ । ಕೃಪೆಮಾಡೂ ಕೃಪೆಮಾಡೂ ॥

7. ಪಾಹೆ ಸರಸ್ವತಿ । ಪಾಹೆ ಸರಸ್ವತಿ । ಪಾಹೆ ಸರಸ್ವತಿ । ಪಾಹೆ ಸದಾ ॥ ಪ ॥ ಅದ್ಭುತ ರೂಪಿಣಿ ದೇವಿ ಮಹೇಶ್ವರೀ ॥ ಚಿತ್ಪುರುಷೇಶ್ವರಿ ಪಾಹಿ ಸದಾ ॥ ಪಾಹಿಂ ॥ ೧ ॥ ಆತ್ಮಸ್ವರೂಪಿಣಿ ದೇವಿ ಮಹೇಶ್ವರಿ ॥ ಆ ತ್ಮಾನಂದಿನಿ ಪಾಹಿ ಸದಾ ॥ ಪಾ ॥ ೨ ॥ ಇಂದೀವರ ವಿಮಳಾಕ್ಷಿ ಮಹೇಶ್ವರಿ ॥ ಇಂದುಕಳಾಧರಿ ಪಾಹಿ ಸದಾ ॥ ಪಾಹಿ ॥ ೩ ॥ ಈಶ್ವರಿ ಶಂಕರಿ ಪಾಪವಿನಾಶಿನಿ ॥ ಶಾಶ್ವತರೂಪಿಣಿ ಪಾಹಿ ಸದಾ ॥ ೪ ॥ ಉನ್ನತ ದನುಜ ಸಮೂಹ ಭಯಂಕರಿ ॥ ಭಿನ್ನವಿಮೋಚನಿ ಪಾಹಿ ಸದಾ ॥ ಪಾ ॥ ೫ ॥ ಊರ್ವಿ ಜಲಾನಲ ಕಾದಿ ಸ್ವರೂಪಿಣಿ ॥ ಭಾಸಾ ಭಗವತಿ ಪಾಹಿ ಸದಾ ॥ ಪಾ ॥ ೬ ॥ ಋಗ್ಯಜುಸ್ಸಾಮಾಥರ್ವಣ ರೂಪಿಣಿ । ಲೋಕನಂದಿನಿ ಪಾಹಿ ಸದಾ ॥ ಪಾ ॥ ೭ ॥ ಲಿಂಗಾ ಸ್ವರೂಪಿಣಿ । ಭುವನಭಿ ಮೋಹಿನಿ ॥ ಶೃಂಗಾರೇಶ್ವರಿ ಪಾಹಿ ಸದಾ ॥ ಪಾ ॥ ೮ ॥ ಲೋಕಾರೂಪಮು ಸುಮತ ಸುರೇಶ್ವರಿ ॥ ಶಾಕಂಭರಿ ಪರಿ ಪಾಹಿ ಸದಾ ॥ ಪಾ ॥ ೯ ॥ ಏಕಾನೇಕ ಸ್ವರೂಪಿಣಿ ಭೈರವಿ ॥ ಶೋಕ ವಿನಾಶಿನಿ ಪಾಹಿ ಸದಾ ॥ ಪಾ ॥ ೧೦ ॥ ಐಂದ್ರಿ ಭವಾನಿ ಪಿತಾಮಹಿ ವೈಷ್ಣವಿ ॥ ಬ್ರಾಹ್ಮಿ ಮಹೇಶ್ವರಿ ಪಾಹಿ ಸದಾ ॥ ಪಾ ॥ ೧೧ ॥

ಓಂಕಾರೇಶ್ವರಿ ಗೌರಿಸುಮೋಹಿನಿ ॥ ಶಾಂತಿ ಸ್ವರೂಪಿಣಿ ಪಾಹಿ ಸದಾ ॥ ಪಾ ॥ ೧೨ ॥ ಔಷಧ ರೂಪಿಣಿ ಭುವನ ವಿಮೋಹಿನಿ ॥ ಶೋಕವಿನಾಶಿನಿ ಪಾಹಿ ಸದಾ ॥ ಪಾ ॥ ೧೩ ॥ ಅಂಗದ ಕಟಕ ಮಹಾ ಮಣಿ ಭೂಷಿಣಿ ॥ ಮಂಗಳ ರೂಪಿಣಿ ಪಾಹಿ ಸದಾ ॥ ಪಾ ॥ ೧೪ ॥ ಅರ್ಕಾಯುತ ಶತ ಶೋಭಿತರೂಪಿಣಿ ॥ ನಿಷ್ಕಳರೂಪಿಣಿ ಪಾಹಿ ಸದಾ ॥ ಪಾ ॥ ೧೫ ॥ ಮು ॥ ವಾಣಿ ಬ್ರಹ್ಮನ ರಾಣಿ । ಪುಸ್ತಕಪಾಣಿ । ಪನ್ನಗವೇಣಿ ॥ ಶ್ರೀ.

8. ಅಂಬಾಂ ಭಜಾಮಿ । ಜಗ । ದಂಬಾಂ ಭಜಾಮಿ ॥ ಪ ॥ ಶಾರದಾಂಬಾಂ ಭಜಾಮಿ ॥ ಆದಿದೇವೀಂ ಭಜಾಮಿ ॥ ಭಕ್ತಿದೇಹೀಂ ಭಜಾಮಿ ॥ ಶಕ್ತಿದೇಹೀಂ ಭಜಾಮಿ ॥ ಮುಕ್ತಿದೇಹೀಂ ಭಜಾಮಿ ॥ ಲಕ್ಷ್ಮಿದೇವಿಂ ಭಜಾಮ್ಯಾಹಂ ॥ ೧ ॥ ಕಂಬುಕಂದಾರಾಂ ಶ್ರೀಂ ॥ ಕಾಳೀಂ ಪರಾಂ ಹ್ರೀಂ ॥ ಬಿಂಬೋದರಾಂ ಶ್ರೀಂ ॥ ಅಂಬುಜಾಕ್ಷಿರಾಂಹ್ರೀಂ ॥ ಕುಂಭಸಂಭವಾದಿ ಮುನಿ ॥ ವಂದಿತೇ ಪಾದಾರವಿಂದೇ ॥ ಅಂಬಾ ॥ ೨ ॥ ಮಾಣಿಕ್ಯ ಚಿತ್ರಕೂಟ ಮೋಹಳೀಂ ॥ ಯೇಕ ವೀರಾ ವೇಣಿಂ ॥ ಪ್ರಯಾಗ ಮಾಧವೇಶ್ವರೀಂ ॥ ಶರ್ವಾಣೀಂ ಕಾಳಾಧರಾ ವೈಷ್ಣವೀಂ ॥ ಹ್ರಾಂಮೃದುವಾಣಜ್ಞವೇಶ ಪೂರ್ವದಿ । ಗ್ಬಂಧಯಾಮಿ ವಂದಯಾಮಿ ॥ ಅಂಬಾ ॥ ೩ ॥ ಲಂಕಾದಿ ನಾಯಕೀಂ ಶಾಂಕರೀಂ ಚಾಮರೀಂ ॥ ಕಾಂಚೀ ಪುರಾಧ್ಯಕ್ಷ ಕಾಮಾಕ್ಷೀ ಸಾ ॥ ಲಂಕಾದಿ ಓಂ ಕಾರೀಂ । ಕ್ಷೇಮಲಾಭೀಕರೀಂ ಪೂರ್ವ ದಿಗ್ಬಂದಾಯಾಮಿ ವಂದಯಾಮಿ ॥ ೪ ॥ ಪಾರಯಂತ್ರಾ ಪಾರಾಮಂತ್ರಾ । ರಕ್ಷಣೀಂ ಶಿಕ್ಷಣೀಂ ॥ ಪಾರಮಾತ್ಮ ಗೂಢ ಕೂಟಪಟ್ಟಣಾಧೀಶ್ವರೀಂ ॥ ಪಾರಮಾತ್ಮ ಸೋದರೀಂ । ಓಂ ಹ್ರಾಂ ಹ್ರೀಂ ಕ್ಲೀಂ ಓಂ ಹುಂ ಫಟ್ ॥ ೫ ॥ ಗಾಯ ಮಂಗಳಾಯತ । ಗಾಯಾ ಕುಳಜ ಭವಾ ॥ ಮಾಯಾ ಕುರುಕ್ಷೇತ್ರ । ಮಹಾ ಕಾಳಹಸ್ತಿನೀಂ ॥ ಭುಜ್ಯ ನೀಂ ನಾಯಕೀಂ ಕೌಭೇರಿಂ ಭೂತನಾಥ । ಪೂರ್ವ ದಿಗ್ಬಂಧಾಯಾಮಿ ವಂದ

ಯಾಮಿ ॥ ಅಂಬಾಂ ಭಜಾಮಿ ॥ ೬ ॥ ಶ್ರೀ ಶೈಲಲಂಪುರಿಂ । ಶ್ರೀ ಮತ್ಕೊಲ್ಲಾಪುರಿಂ ॥ ವಾಸಿನಿಂ ವಾರಿಜೋಗ । ನಾಗವಿನ್ಯಾ ವಾಸಿನಿಂ ॥ ಭ್ರಮರವಂದ್ಯಾ ವಂದಿನೀಂ । ಕ್ಲಾಂಕ್ಲೀಕ ಚಾಮುಂಡೀಂ । ಚಂಡ ಮುಂಡ ಮರ್ದಿನೀಂ ॥ ವಾಮಲೋಚನಾಂ ಶ್ರೀಂ । ವಡ್ಯಾದಿ ಸಂಭಾವೀಂ ॥ ನಾಮ ವೀತಿಹೋತ್ರ ಶಮನ ॥ ಪೂರ್ವ ದಿಗ್ಬಂದ ಯಾಮಿ ವಂದಯಾಮಿ ॥ ಮು ॥ ಪಾಹಿ ತಾಯೆ ತಾಯೇ । ಸುಜನರ । ಕಾಮಧೇನು ಪ್ರಿಯೇ ॥

9. ಭಾಗ್ಯದ ಲಕ್ಷ್ಮಿ ಬಾರಮ್ಮಾ । ನಮ್ಮಮ್ಮಾ ಸೌ । ಭಾಗ್ಯಾದ ॥ ಪ ॥ ಗೆಜ್ಜೆಯ ಕಾಲಾ ಧ್ವನಿಯಾ ತೋರುತ । ಹೆಜ್ಜೆಯ ಮೇಲೆ । ಹೆಜ್ಜೆಯನಿಕ್ಕುತ ॥ ಸಜ್ಜನ ಸಾಧು ಪೂಜೆಯ ವೇಳ್ಯಕೆ । ಮಜ್ಜಿಗೆಯೊಳಗಿನ ಬೆಣ್ಣೆಯಂತೆ ॥ ಭಾಗ್ಯಾದ ॥ ೧ ॥ ಕನಕವೃಷ್ಟಿಯ ನೀಡುತ ಬಾರೆ । ಮನಕೆ ಮನವ ಸಿದ್ಧಿಯ ಮಾಡೇ ॥ ದಿನಕರ ಕೋಟಿ ತೇಜದಿ ಹೊಳೆಯುವ । ಜನಕರಾಯನ ಕುಮಾರಿ ಬಾರೆ ॥ ಭಾಗ್ಯಾದ ॥ ॥ ೨ ॥ ಅತ್ತಿತ್ತಗಲದೆ ಭಕ್ತರ ಮನೆಯಲಿ । ನಿತ್ಯ ಮಹೋತ್ಸವ ನಿತ್ಯ ಸುಮಂಗಳ ॥ ಸತ್ಯವ ತೋರುತ ಸಂತಸದಿಂದಲಿ । ಚಿತ್ತದಿ ಹೊಳೆಯುವ ಪುತ್ಥಳಿ ಬೊಂಬೇ ॥ ಭಾಗ್ಯಾದ ॥ ೩ ॥ ಸಂಖ್ಯೆಯಿಲ್ಲದ ವರಗಳ ಕೊಟ್ಟು । ಕಂಕಣಕಯ್ಯ ತಿರುಗುತ ಬಾರೆ ॥ ಕುಂಕುಮಾಂಕಿತ ಪಂಕಜಲೋಚನೆ । ವೆಂಕಟರಮಣನ ಮೋಹದ ರಾಣಿ ॥ ಭಾಗ್ಯದ ಲಕ್ಷ್ಮಿ ॥ ೪ ॥ ಸಕ್ಕರೆ ತುಪ್ಪ ಹಾಲನೇ ಬೆರಸಿ । ಶುಕ್ರವಾರದ ಪೂಜೆಯುಗೊಳ್ಳೇ ॥ ಅಕ್ಕರೆಯುಳ್ಳಾ ಹಳಗಿರಿ ರಂಗನ । ಪುರಂದರ ವಿಠಲನ ಪಟ್ಟದ ರಾಣಿ ॥ ಭಾಗ್ಯಾದಾ ॥ ೫ ॥ ಮು ॥ ಅಂಬಾ ದಯಾದೋರು । ದಯದೋರು । ದಯದೋರು । ದೇವೀ ಕೃಪೇ ಮಾಡು । ಕೃಪೆ ಮಾಡು ॥ ಕೃಪೆ ಮಾಡು ॥ ೬ ॥

10. ಮಂಗಳಂ ಜಯಾ । ಮಂಗಳಂ ಮಾ । ಮಂಗಳಂತು । ನೀತಿ-ಶರ್ವ । ಮಂಗಳಂ ಜಯಾ ॥ ಪ ॥ ಜಯತು ಪಾರ್ವತಿ । ಶರಣು

ಭಾರತೀ । ನಿರುತ ಬೆಳಗೂತಿರುವೆ ನಿನ್ನಾ । ಚರಣಾಕಾರತಿಯಾ ॥ ೧ ॥ ಜಯತೂ ಧನ್ಯಳೇ । ಜಯತೂ ಪುಣ್ಯಳೇ । ಜಯ ಭಾವಾನೀ । ಜಯ ಮೃಡಾನೀ । ಜಯ ತೂಮಾನ್ಯಳೇ ॥ ೨ ॥ ಅಮರಾ ವಿನ ಯೂತೇ । ಹಿಮಗಿರೀ ಸೂತೇ । ಕಮಲಾ ಗಂಧಿನಿ । ವಿಮಲಾ ಚರಿತೇ । ಅಮಿತಾ ಗುಣಯೂತೇ ॥ ಮಂಗಳಂ ॥ ೩ ॥ ಅಂಬುಜಾಂಬಕೀ । ಶಂಭುನಾಯಕೀ । ಕಂಬುಕಂಠಿನೀ । ನಂಬಿದೇ ನಿನ್ನಾ । ಶುಂಭೆ ಘಾತಕೀ ॥ ಮ ॥ ೪ ॥ ಶ್ರೀ



# IV ನೇ ಅಧ್ಯಾಯ.

## ॥ ಶಿವಸ್ತುತಿ ॥

॥ ಶ್ರೀ ಪಾರ್ವತೀವಲ್ಲಭಾಯ ನಮಃ ॥

1. ಶಿವ ಮಂತ್ರವನೇ । ನುಡಿ ನುಡೀ । ಭವದ ಲತೆಯ ಬುಡ ಕಡೀ ಕಡೀ ॥ ಶಿ ॥ ಪ ॥ ತಾಯಿಯ ಒಡಲೊಳು ಮಲ ಮೂತ್ರವ ಕುಡಿ । ದಾಯಸ ಬೇಡವೊ ತಡೀ ತಡೀ ॥ ನಿನ ॥ ಗಾಯಸ ॥ ೧ ॥ ಮಾಯರಹಿತ ಪರಮಾತ್ಮನ ಪಾದವ । ಉಪಾಯದಿಂದಲಿ ಪಿಡೀ ಪಿಡೀ ॥ ಜಹು ॥ ಉಪಾಯ ॥ ಶಿ ॥ ೨ ॥ ವನಿತೆಯು ಸುತರೂ ಕನಸಿನ ಮೇಳವು । ತನುವಿನ ಪಾಶವ ಬಿಡೂ ಬಿಡೂ ॥ ಓ । ತನುವಿನ ॥ ಶಿವ ॥ ೩ ॥ ಮನದೊಳು ಪರಿಪರಿ ಅವಗುಣ ವೆಣಿಸದೆ । ಘನ ಸುಖ ಶಿವಪದ ಪಿಡೀ ಪಿಡೀ ॥ ನೀ ॥ ಘನಸುಖ ॥ ಶಿ ॥ ೪ ॥ ಹರಿ ದಾಡುವ ಮನ । ಹರಿ ಅಜ ಇಂದ್ರರ । ಬೆರಸಿತು ಭವದೊಳು ಪುಡೀ ಪುಡೀ ॥ ಓ ॥ ಬೆರಸಿತು ॥ ಶಿವ ॥ ೫ ॥ ವರ ಬೆರಟೂರಾ ಗುರು ಪಾದೇಶನ । ಚರಣಾಮೃತ ರಸ ಕುಡೀ ಕುಡೀ ॥ ನೀ ॥ ಚರಣಾ ವೃತ ॥ ಶಿವ ॥ ೬ ॥ ಮು ॥ ಮುಕ್ತನಾದೆನು । ಭವದಿಂದಾ । ಈಶಾನುಗೃಹ ದಯದಿಂದಾ ॥ ಶ್ರೀ

2. ಕರುಣಾಕರ ನಿಮಗೊಂದಿಪೆನ್ನೈ । ಮುದದಿಂದಲೀ ನೀವೇ ಜಗ ದೀಶಾ ॥ ಕರು ॥ ಪ ॥ ಸೃಷ್ಟಿಯನೂ ಕಷ್ಟದಲೀ । ಹುಟ್ಟಿಸಿದೇ । ಸಂ । ರಕ್ಷಿಸಿದೇ ತವ । ದೃಷ್ಟಿಯಿಂದ ನಿಮಗೊಂದಿಪೆನ್ನೈ ॥ ಕರು ॥ ೧ ॥ ಮಳೆಬೆಳೆಯೂ । ನೀಯುತಲೀ । ಸಲಹ್ಯೆ ದೇವನೇ ಇಳೆಯಂ ನೀವು । ಒಲು । ದೃಷ್ಟಿಯಿಂದ ನಿಮ ॥ ಗೊಂ ॥ ೨ ॥ ಮು ॥ ಶಂಕರ ಮೂರ್ತಿಯನೂ । ಭಜಿಸಿರೊ ಹೃದಯದಲೀ ॥ ಶ್ರೀ

3. ಈಶ ಬಾರೋ | ನಾಶ ರಹಿತ | ವಾಸವಾರ್ಚಿತ | ಪಾಶಹರನೆ | ಘಾಸಿ ಹರಿಸೊ | ದಾಸ ರಕ್ಷಕಾ || ಈ || ಪ || ಅಂಧಾಕಾದಿ ದನುಜ ಹರನೆ | ಬಂಧಹರ್ತನೇ || ಮುಂದೆ ಯೆನ್ನಾ ಪಾಲಿಸೈ | ವಂದಿಸೂವೆನೂ || ಈಶ ಬಾ || ೧ || ಮಾರಹರನೆ ಘೋರ ದನುಜ | ಹಾರ ಶಂಕರಾ || ದಾರಿತೋರಿಸಯ್ಯ ಎನಗೆ | ನಾರದಾರ್ಚಿತಾ || ಈಶ || ೨ || ಮೃಡನೆ ಬಾರೋ | ವಡನೆ ಯೆನ್ನಾ ಬಿಡದೆ ಪಾಲಿಸೋ || ತಡೆಯದೇ ನಿಂನಡಿಯ ಪಿಡಿದು | ದೃಡದಿ ನಂಬುವೇ || ಈ || ೨ || ಸಾಮ ಗಾನ ಲೋಲ | ಶ್ಯಾಮ ಸೂರಿವಂದಿತಾ || ನೇಮದಿಂದ ನಿಂತು ನಿಮ್ಮ | ನಾಮುವನ್ನು ಭಜಿಪೆನೈ || ಈ || ೪ || ಸುಂದರಾಂಗ ಸುಜನ ವಿನುತ | ಸುಗುಣ ಭೂಷಿತಾ || ಸುಬ್ರಹ್ಮಣ್ಯನಂತೆ ದಾಸನೀಗೆ | ವರವ ಪಾಲಿಸೇ || ಈ || ೫ || ಮು || ಜೈಜೈ ವಿಶ್ವನಾಥ ಗಂಗಾ || ಜೈಜೈ || ರಾಮ ನಾಥ ಲಿಂಗಾ || ಜೈಜೈ || ವಿಶ್ವ || ಶ್ರಿ

4. ಭಜನೆ ಮಾಡುವ ಬನ್ನಿರೋ | ಸದಾಶಿವನ | ಭಜನೆ ಮಾಡುವ || ಪ || ಭಜನೆ ಮಾಡುವ ನಿತ್ಯ | ಸುಜನರೆಲ್ಲರು ಕೂಡಿ | ಕುಜನ ಸಂಗವ ದೂರ ಮಾಡಿ ಸದ್ಭಕ್ತಿಯಿಂ || ಭಜ || ಅನು || ಪಲ್ಲವಿ || ಶತಕೋಟಿ ಪಾಪವನ್ನೂ | ಮಾಡಿದ ಮಕ | ಪತಿತರು ನಾವು ನೀನು ಪತಿತಪಾವನನೆಂಬ ಬಿರಿದುಳ್ಳ ದೇವನು | ಕ್ಷಿತಿಯೊಳುತ್ತಮಗತಿ ತೋರೆಂದು ಶಿವನಾ || ಭಜನೆ || ೧ || ಘುಡುಘುಡಿಸುತ ಬರುವಾ | ಯಮುನಾಳ್ಕಂ | ಕಡಿದು ಮಾಡುತ ಕೋಪವ || ಝುಡಿದು ಶೂಲವಿ ಭಕ್ತರನು ಕೈಯ ಪಿಡಿದು | ಕಡು ಗರುಣದಿ ಪೊರೆಯುವ ಮೃತ್ಯುಂಜಯನಾ || ಭಜನೆ || ೨ || ಪಂಚವಿಂಶತಿ ತತ್ವದಿ | ತಾನಿರ್ಮ ಪ್ರಪಂಚ ದೊಳಾ ನಂವದಿ || ಪಂಚವಿಂಶತಿ ಲೀಲೆ ತೋರಿ ತನ್ನ ಭಕ್ತರ | ಸಂಚಿತ ಕರ್ಮವ ನುರುಹಿದ ಶಿವನಾ || ಭ || ೩ || ಕಷ್ಟಕರ್ಮಗಳಾ ನೋಡಿ | ನಿಮಿಷಾರ್ಧದಿ | ಸುಟ್ಟು ನಿರ್ಮಲವ ಮಾಡಿ | ಇಷ್ಟಾರ್ಥ ಗಳನಿತ್ತು ಕರುಣದಿ ಪಾಲಿಪ | ಅಷ್ಟದಳದ ಪದ್ಮನಲ್ಲಿರುವ ಶಿವನ

॥ ಭಜನೆ ॥ ೪ ॥ ಕರುಣಾರಸವನೆ ಬೀರಿ । ಯೋಗವು ತತ್ವ । ನೆರೆ ಶಾಂತಿ ವಿರತಿ ತೋರಿ । ಧರೆಯೊಳಧಿಕ ಜ್ಞಾನ ಬೋಧಿಸಿ ಪೊರೆಯುವ । ಗುರು ಶಿವಲಿಂಗನೆನೀನೆಂದು ಶಿವನ ॥ ಭಜನೆ ॥ ೫ ॥ ಮು ॥ ಸಾಂಬ ಶಿವನೆ ನೀ ದಯದೋರೋ । ಗಿರಿಜಾರಮಣನೆ ಕೃಪೆ ಮಾಡೋ ॥ ಶ್ರಿ

5. ಭಜಮಾನಸ ದೇವಂ । ಭಜರೇ । ಭಜಮಾನಸ ದೇವಂ ॥ ಪ ॥ ರಜತ ಗಿರೀಶಂ । ಭುಜಗ ವಿಭೂಷಂ। ಕುಜನ ವಿನಾಶಂ । ಸುಜನೋಲ್ಲಾಸಂ ॥ ಅ ॥ ಪ ॥ ಮುರಹರ ಮಿತ್ರಂ । ಪರಮ ಪವಿತ್ರಂ । ಉರುತೇಜ ಗಾತ್ರಂ । ವರ ಶಿಖಿ ನೇತ್ರಂ ॥ ೧ ॥ ಸುಗುಣ ಸುಧಾಮಂ । ಜಗದಾಧಾರಂ । ಅಗಣಿತ ಮಹಿಮಂ । ಮಿಗೆ ಪೂರ್ಣಕಾಮಂ ॥ ೨ ॥ ಮಂತ್ರ ಪ್ರಭಾವಂ । ಮಂತ್ರಾರ್ಥ ದೇವಂ । ಯಂತ್ರೋದ್ಧಾರಂ । ತಂತ್ರ ವಿಧೂರಂ ॥ ಭಜ ॥ ೩ ॥ ಜನನ ಕುಠಾರಂ । ಘನ ವೇದಸಾರಂ । ಮುನಿಕುಲಪಾಲಂ ಅನುಪಮ ಲೀಲಂ ॥ ಭಜ ॥ ೪ ॥ ವರಗೌರಿಸಂಗಂ । ಕರುಣಾಂತರಂಗಂ । ಶರಣ ಕೃಪಾಂಗಂ । ಗುರು ಶಿವಲಿಂಗಂ ॥ ೫ ॥ ಮು ॥ ಸಾಂಬ ಶಿವನೆ ನೀದಯದೋರೋ । ಗಿರಿಜಾ ರಮಣನೆ ಕೃಪೆ ಮಾಡೊ ॥ ಸಾಂಬಶಿವನೆ ನೀ ಕೃಪೆಮಾಡು ॥ ಗಿರಿಜಾ ದಯದೋರು ॥ ಶ್ರಿ

6. ಮಾತುಮಾತಿಗೆ ಶಂಕರಾ । ಶ್ರೀ ಗುರುವೆ ಸ । ರ್ವೋತ್ತುಮ ನೆನಬಾರದೆ ॥ ಪ ॥ ಜೋತಿ ಸಂಗದಿ ಉರಿದ್ಹೋಗ್ವ ಕರ್ಪುರದಂತೆ ॥ ಪಾತಕರಾಶಿ ನಿಂತುರಿದು ಹೋಗುವದಾಗಿ ॥ ಮಾ ॥ ಅ ॥ ಪ ॥ ಸ್ನಾನವ ಮಾಡುವಾಗ । ನೇಮದಿ ಆತ್ಮ । ಧ್ಯಾನವ ಮಾಡುವಾಗ ಜಾಣತನದೆ ಅನ್ನ ಉಂಡು ಗಂಗಾಮೃತ । ಪಾನ ಮಾಡುವ ಕಾಲದಲ್ಲಿಯು ಮನವೇ ॥ ಮಾತು ॥ ೧ ॥ ಬಿಸಜಾಕ್ಷಿ ನೋಡುವಾಗ । ಕೂಡುತ ನಿತ್ಯ । ಬೆಸೆದು ಮಾತಾಡುವಾಗ । ಬಸುರಲಿ ಬಂದ । ಸುಮಗನ ಮುದ್ದಿಸುವಾಗ । ಹಸನಾದ ವಸ್ತ್ರಂಗಳುಡುವಾಗ ಮನವೇ ॥ ಮಾತು ॥ ೨ ॥ ಬೆಟ್ಟವ ನೇರುವಾಗ । ಕಾಲ್ಜಾರಿದಲ್ಲಿ । ಥಟ್ಟನೆ

ಜೀಳುವಾಗ || ಅಷ್ಟಭೋಗದಿ ನಿತ್ಯ ಲೋಲುಪ್ತಿ ಪಡೆವಾಗ | ದುಷ್ಟ ದಾರಿದ್ರ್ಯವು ಬಂದಾಗ ಮನವೇ || ಮಾತು || ೩ || ಸುಲಿವ ಕಳ್ಳನು ಬಂದಾಗ | ಘೋರಾರಣ್ಯ | ದಲಿ ವ್ಯಾಘ್ರ ಮುರಿಯುವಾಗ || ಛಳಿ ಜ್ವರ ಕೆಮ್ಮು ಉಬ್ಬಸ ರೋಗ ಬಂದಾಗ | ಮಳೆ ಘಾಳಿ ಸಿಡಿಲಿ ನಾರ್ಭಟದಲ್ಲಿ ಮನವೇ || ಮಾತು || ೪ || ಗುರು ಸೇವೆ ಗೈಯ್ಯು ವಾಗ | ಶ್ರೀ | ಗುರುಕೊಟ್ಟ ವರ ಮಂತ್ರ ಜಪಿಸುವಾಗ | ಗುರುವೆ ಗುರುವೆ ಕಲ್ಪ ತರುವೆ ಪಾಲಿಸು ಎಂದು ಗುರು ಶಿವಲಿಂಗ ರಂಗನ ನಂಬಿ ಮನವೇ || ಮಾ || ೫ || ಮು || ಶಂಭು ಶಂಭು ಶಂಭು ಗಂಗಾ || ಶಂಭು ಶಂಭು ಗಂಗಾ || ಶಂಭು ||

7. ಸಾಂಬ ಸದಾಶಿವಾ | ಸಾಂಬ ಸದಾಶಿವಾ | ಸಾಂಬ ಸದಾಶಿವಾ || ಸಾಂಬ ಸದಾಶಿವಾ || ಪಲ್ಲವಿ || ಅಗಣಿತ ಗುಣಗಣ | ಸುಗುಣ ಸು ರೋತ್ಕ್ರಃ | ಅಘನಾಶನ ಅಮರೇಶ ಶಿವಾ || ಸಾಂಬ || ೧ || ಈತಿನುತ ಯುತ ಪಶು | ಪತಿ ಗಿರಿಸುತೆ | ವಶ ಅಘನಾಶನ ಅಮರೇಶ ಶಿವಾ || ಸಾಂಬ || ೨ || ಉರಗಾ ಭೂಷಣ | ನರ ಶಿರ ಮಾಲಾ | ಗಜ ಚರ್ಮಾಂಬರ | ಧಾರ ಶಿವಾ || ೩ || ಏಕೋ ಮೇವಾ | ಭಜಕೋ ದೇವಾ | ಏಕೋ ಭಾವಾ ಸದಾ ಜೀವ ಶಿವಾ || ೪ || ಐಶ್ವರ್ಯಾಧಿ ಪತಿ | ಕೈವಲ್ಯ ಶಶಿ ರವಿ | ವೈಶ್ವಾನರ ತ್ರೈನೇತ್ರ ಶಿವಾ || ೫ || ಓಂ ನಮಾ ಶಿವಾಯ | ತಿ ನಾಮ ಉಚ್ಚರ | ಯುತಿ ಪ್ರೇಮಃಘಾ | ಸಿದ್ಧಿ ದಾ ಪ್ರೇಮ ಶಿವಾ || ಹರ || ೬ || ಔಷಧ ಮಿತಪರ | ಮೌಷಧ ಸದ್ಗತಿ | ಕೈವಲ್ಯ ಶಶಿ ರವಿ | ನೇತ್ರ ಶಿವಾ || ಹರ | ಸಾಂಬ || ೭ || ಅಂ ನಮಃ | ಇಂ ನಮಃ | ಉಂ ನಮಃ | ಏಂ ನಮಃ | ಎನ್ನಮಃ | ಔನ್ನಮಃ | ಅಮರ ಶಿವಾ || ಹರ | ಸಾಂಬ || ೮ || ಮು || ಸಾಂಬ ಸದಾ ಶಿವಾ | ಸಾಂಬ ಸದಾ ಶಿವಾ | ಸಾಂಬ ಶಿವಾ ||

8. ಪದಕಮಳೀಂಚೆಂ | ಭೃಂಗಾ ನಮಃ ಶಿವಾ || ಪದ | ಪ || ರುದ್ರಾ ಭಿಷೇಕೇಂ | ಪೂಜಿತ ತುಝಲಾ | ಕರತಳೀಂ ಪಾರ್ಥಿವ | ಲಿಂಗಾ |

ನಮಃ ಶಿವ ‖ ಪದಕ ‖ ೧ ‖ ಯೋಗಾ ಯಾಗಾ । ಜಪ ತಪ ಸಾಧನ । ಧರ್ಮ ಪರಾಯಣಾ । ರಂಗ ನಮಃ ಶಿವಾ ‖ ಪದ ‖ ೨ ‖ ಸರಿಗಮ ಪಧನಿಸಾ । ಗಂಧರ್ವ ಗಾಯನಾ । ವಾಝತೆ ತಾಳ ಮೃ । ದಂಗಾ ನಮಃ ಶಿವಾ ‖ ಪದಕಮ ‖ ೩ । ಶರಣ ಶರಣ । ರಘುನಾಥ ನಿರಂತರ । ಮಾ ಘೇ ಹೇಚೀ ಅಭಂಗ ನಮಃಶಿವಾ ‖ ಪದಕಮ ‖ ೪ ‖ ಮು ‖ ಓಂ ಶಿವಾ ಓಂ ಶಿವಾ ಪರಾತ್ಪರಾ ಶಿವಾ ಓಂಕಾರಾ ಶಿವಾ ತವ ಶರಣಂ ‖ ಶ್ರೀ

9. ಭಜ ಗೌರೀಶಂ । ಭಜ ಗೌರೀಶಂ । ಭಜ ಗೌರೀಶಂ । ಮಂದ ಮತೇ ‖ ಪ ‖ ಜಡಜಭವಾ ದುಸ್ತರ । ಜಲಧೌತ ರಣಾ । ಧ್ಯೇಯೌ ಚಿಂತ್ಯೌ । ಶಿವಹರ ಚರಣೌ । ಅನ್ಯೋಪಾಯೌ । ನಹಿ ತತ್ಸತ್ಯಂ । ಗೇಯಂ ಮುಂಚತಿ । ರೂಪ ಮಜಸ್ರಾಂ ‖ ೧ ‖ ಧಾರಾಪತ್ಯಕ್ಷೇತ್ರಂ ವಿತ್ತಂ ‖ ಧೇಯಂ ಧೇಯಂ । ರೂಪ ಮಜಸ್ರಂ ‖ ನೇಯಂ ಸಜ್ಜನ ಸಂಗೇ ಚಿತ್ತಂ । ಧೇಯಂ ದೀನ ಜನಾಯಚ ವಿತ್ತಂ ‖ ಭಜ ‖ ೨ ‖ ಮಲಿನೇ ಚಿತ್ತೇ ಪುನರಾವೃತ್ತಿಂ । ಪುನರಪಿ ಜನನೀ ಜಠರೋತ್ಪತ್ತಿಂ ‖ ಪುನಪುನ ರಪ್ಯಾಶಾಪಾಶಾಕುಲಿಶಂ । ಕಿಂ ನಹಿ ಮುಂಚತಿ ಕಥಮಿಹಸತ್ಯಂ ‖ ಭಜ ‖ ೩ ‖ ಮಾಯಾಕಲ್ಪಿತ ಮೈಂದ್ರಂ ಜಾಲಂ । ನೈತತ್ಸತ್ಯಂ ದೃಶ್ಯವಿಕಾರಂ ‖ ಜ್ಞಾತೇ ತತ್ವೇ ಸರ್ವಮಸಾರಂ । ಮಾಕುರು ಮಾಕುರು ವಿಷಯ ವಿಚಾರಂ ‖ ಭಜ ‖ ‖ ೪ ‖ ರಜೌ ಸರ್ಪ ಭ್ರಮಣಾ ರೂಪಂ । ತದ್ವತ್ಬ್ರಹ್ಮಣಿ ಜಗದಾರೂಪಂ । ಮಿಥ್ಯಾ ಮಾಯಾ ಮೋಹ ವಿಕಾರಂ । ಮನಸಿ ವಿಚಾರಯ ವಾರಂವಾರಂ ‖ ೫ ‖ ಅಧ್ವರ ಕೋಟೀ । ಗಂಗಾ ಗಮನಂ । ಕುರುತೇ ಯೋಗಂ ಚೇಂದ್ರಿಯ ದಮನಂ ‖ ಜ್ಞಾನ ವಿಹೀನೇ ಸರ್ವ ಮನೀನಾ । ಮುಕ್ತಿ ರ್ನಭವತಿ ಜನ್ಮ ಶತೇನಾ ‖ ಭಜ ‖ ೬ ‖ ಸೋಹಂ ಹಂಸೋ ಬ್ರಹ್ಮೈ ವಾಹರಿ । ಶುದ್ಧಾನಂದಂ ತತ್ವ ಪರೋಹಂ ‖ ಅದ್ವೈತೋಹಂ ಸಂಗವಿಹೀನೆ । ಚಿದ್ರೂಪಾತ್ಮನಿ ಸಖಿಲೇ ಲೀನೇ ‖ ೭ ‖ ಶಂಕರ ಕಿಂಕರ ಚಿಂತಾಮಣಿನಾ । ನಿರ್ಮಿತ ಮಷ್ಟಕ ಮೇತನ್ಮಾಸ್ಯಂ ‖ ಯಸ್ಸದ್ಭಕ್ತ್ಯಾ ಪಠತೇ ನ್ನಿತ್ಯಂ । ಬ್ರಹ್ಮಣಿ

ಲೀನೋ ಭವತಿಹ ಸತ್ಯಂ ॥ ಭಜ ॥ ೮ ॥ ಮು ॥ ನಮಾಮಿ ಶಂಕರ್ । ಭವಾನಿ ಶಂಕರ್ । ಉಮಾ ಮಹೇಶ್ವರ ತವಚರಣೋ ॥ ಶ್ರೀ

10. ಮಂಗಳಂ ಶ್ರೀ ಸಾಂಬಗೇ । ಜಯ । ಮಂಗಳಂ । ಶಶಿ ಮೌಳಿಗೇ ॥ ಪ ॥ ಹಾರ ನಪೂರಾ । ಕೇಯೂರಾ ಕಂಕಣವಿಟ್ಟು । ಸಾರಾ ಮಹಿಮ ಶಿವ ಸಾಂಬಾ ॥ ೧ ॥ ಪಾರ್ವತಿ ರಮಣಗೆ ಕಾಮಾದಹನನಿಗೆ । ಶಣ್ಮುಖಪಿತ ಶಿವ ಸಾಂಬಗೆ ॥ ಜಯ ॥ ೨ ॥ ಶ್ರೀ

11. ಶಿವ ಹರ ಶಂಕರ ಗೌರೀಶಂ । ವಂದೇ ಗಂಗಾಧರ ಮೀಶಂ ॥ ಪ ॥ ರುದ್ರಂ ಪಶುಪತಿ ಮೀಶಾನಂ । ಕಲಯೇ ಕಾಶೀ ಪುರನಾಥಂ ॥ ಶಿವ ॥ ॥ ಅ ॥ ಪ ॥ ವಿಶ್ವೇಶಾ ತವಶರಣಂ । ವಿಶ್ವಾನಾಥಾ ತವಶರಣಂ । ಭಾಳ ಲೋಚನ ಪರಮಾನಂದಾ । ನೀಲಕಂಠಾ ತವಶರಣಂ ॥ ೧ ॥ ಗೌರೀಶಾ ತವಶರಣಂ । ಗೌರೀನಾಥಾ ತವಶರಣಂ । ನಂದಿವಾಹನ ನಾಗಭೂಷಣ । ಚಂದ್ರಶೇಖರ ತವಶರಣಂ ॥ ೨ ॥ ಭೂತೇಶಾ ತವಶರಣಂ । ಭೂತಿ ವಿಧಾರಕ ತವಶರಣಂ ॥ ಭವಭಯ ನಾಶನ ಭೀಮ ಪರಾಕ್ರಮ । ಭುಜಂಗಭೂಷಾ ತವಶರಣಂ ॥ ಶಿವ ॥ ೩ ॥ ವಿರೇಶಾ ತವಶರಣಂ । ವೀರವಿಕ್ರಮ ತವಶರಣಂ ॥ ವಿಷ್ಣುವಲ್ಲಭ ನಿರುಪಮಲೋಚನ ವಿಶಾಲ ಭಾಳಾ ತವಶರಣಂ ॥ ೪ ॥ ಕರುಣಾನಿಧೇ ತವಶರಣಂ । ಕರುಣಾಸಾಗರ ತವಶರಣಂ ॥ ಕಾಮವಿದಾಹನ ಕಲಿಮಲನಾಶನ ಕಪಾಲಮಾಲಾ ತವ ಶರಣಂ ॥ ಶಿವ ॥ ೫ ॥ ಪತೀತಪಾವನ ತವಶರಣಂ । ಪತಿತೋದ್ಧಾರಕ ತವಶರಣಂ ॥ ಪರಾತ್ಪರಾ ಪಾರ್ವತಿಪ್ರೀಯ ಪುರಾಣಪುರುಷಾ ತವ ಶರಣಂ ॥ ಶಿವ ॥ ೬ ॥ ನಿಜಾನಂದಾ ತವಶರಣಂ । ನಿಜಪದದಾಯಕ ತವಶರಣಂ ॥ ನಿತ್ಯನಿರಂಜನ ನಿರುಪಮ ವಿಭವಾ । ನಿಖಿಲಾನಂದಾ ತವ ಶರಣಂ ॥ ಶಿವ ॥ ೭ ॥ ಮಾಯಾಹೀನಾ ತವಶರಣಂ । ಮಾಯಾತಾರಕ ತವಶರಣಂ ॥ ಮಾಯಾತಾರಕ ತವಶರಣಂ । ಮಾಯಾ ಜಲನಿಧಿ ಮಗ್ನಂ ಮಾಂ । ಪಾಲಯ ಪಾಲಯ ತವಶರಣಂ ॥ ಶಿವ ॥ ೮ ॥ ಶ್ರೀ



# V ನೇ ಅಧ್ಯಾಯ.

॥ ವಿಷ್ಣುಸ್ತುತಿ ॥

॥ ಶ್ರೀ ಹರಿಗುರವೇ ನಮಃ ॥

1. ಕರ್ಮಬಂಧನ ಛೇದನಂ । ರಘುರಾಮನ ನಾಮವ । ನೆನೆ ಮನವೇ ॥ ಪ ॥ ಕಲಿಯುಗದಲಿ ಹರಿನಾಮವ ನೆನದರೆ ಕುಲಕೋಟಿಗಳುದ್ಧರಿಸುವವೂ ॥ ಸೆಲೆ ನೆಲೆ ಭಕ್ತಿಗೆ । ಸುಲಭ ವೆಂದೆನಿಸುವ । ಕಮಲಜ ನಾಭನ ನೆನೆ ಮನವೇ ॥ ಕರ್ಮ ಬಂಧನ ॥ ೧ ॥ ಸ್ನಾನವನರಿಯೆನು ಧ್ಯಾನವನರಿಯೆನು । ಏನುವ ನರಿಯೆನಬೇಡಾ ॥ ಜಾನಕಿವಲ್ಲಭ ದಶರಥರಾಮನ । ಜ್ಞಾನ ವಿನೋದದಿ ನೆನೆ ಮನವೇ ॥ ಕ ॥ ೨ ॥ ಯಂತ್ರವನರಿಯೆನು ತಂತ್ರವ ನರಿಯೆನು । ಏನೇನರಿಯೆನು ಎನ ಬೇಡಾ ॥ ಸಂತತ ಸಲಹುವ ನಾಮವ ಮನದಲಿ । ಜಗ । ದಂತರ್ಯಾಮಿಯ ನೆನೆ ಮನವೇ ॥ ೩ ॥ ಜಪವಂ ನರಿಯೆನು ತಪವಂ ನರಿಯೆನು । ಉಪದೇಶವಿಲ್ಲೆಂ ದೆನ ಬೇಡಾ ॥ ಅಪಾರಮಹಿಮನ ಸರ್ಪ ಶಯನನ । ಉಪಾಯದಿಂದಲಿ ನೆನೆ ಮನವೇ ॥ ಜಪ ॥ ಉ ॥ ೪ ॥ ಅರ್ಚಿಸಲರಿಯೆನು ಮೆಚ್ಚಿಸಲರಿಯೆನು । ಪೂಜಿಸಲರಿಯೆನು ಎನ ಬೇಡಾ ॥ ಸಚ್ಚಿದಾನಂದ ಮುಕುಂದನ ನಾಮವ । ನಿಶ್ಚಿಂತೆಯಲೀ ನೆನೆಮನವೆ ॥ ಕರ್ಮ ॥ ॥ ೫ ॥ ತಾಪತ್ರಯಗಳ ತಪ್ಪಿಸಿ ಜನರಾ । ಪಾಪಗಳೆಲ್ಲಾ ಪರಿಹರಿಸುವನೂ ॥ ಶ್ರೀಪತಿ ಸದಮಲ ನಾಮವ ಮನದಲಿ । ಗೋಪೀನಾಥನ ನೆನೆ ಮನವೇ ॥ ೬ ॥ ವರದಾ ವೀರ ನಾರಾಯಣ ಕಿಂಕರ । ನೆಂಬುವ ಮತವನು ಬಿಡಬೇಡಾ ॥ ಹರಿಯೂ ಇಹಪರ ಗತಿಗಳ ಕೊಡುವನು । ಪುರಂದರ ವಿಠಲನ ನೆನೆ ಮನವೇ ॥ ಕರ್ಮ ॥ ೭ ॥ ಮು ॥ ನಾರಾಯಣ ಹರೀ । ಭಗವಾನ್ ಹರಿ ಹರಿ ಅವತಾರೀ ॥ ಶ್ರೀ

